ಪ್ರಕಾಶಕರು:
ಮಹಾಂತಪ್ಪ ಗೊಂಗಡಶೆಟ್ಟಿ, ಇಲಕಲ್ಲ.

ಪ್ರಕಾಶನ ಸ್ಥಳ:
ಮಹಾಂತಪ್ಪ ಗೊಂಗಡಶೆಟ್ಟಿ, ಇಲಕಲ್ಲ. ಇವರ ಮನೆ
ಸಿ ಸ. ನಂ. ೨೦೧೪ ವಾರ್ಡ ನಂ ೧

ಪ್ರಕಾಶನ ದಿನ:
ದಿ. ೧ ೬-೧೯೫೭

ಮುದ್ರಕರು:
ಬಿ. ಎಸ್. ವಾಲಿ
ಒಡೆಯರು: ಶ್ರೀ ಮಹಾಂತೇಶ-ಪ್ರಿಂಟಿಂಗ್ ಪ್ರೆಸ್, ಇಲಕಲ್ಲ.

|| ಓಂ ||

# ಸಮರ್ಪಣ.

ಷಟ್‍ಸ್ಥಲದ ಮರ್ಮವನರಿತು ಶಿವಯೋಗ ಸಾಧನದಲ್ಲಿದ್ದ
ಷಟ್‍ಸ್ಥಲ ಬ್ರಹ್ಮಜ್ಞಾನಿ

**ಶ್ರೀ ಗುರು ಚನ್ನಬಸವಸ್ವಾಮಿ ಹಿರೇಮಠ,**
**ಮಾಗಣಗೇರಿ. ಚರಪಟ್ಟಾಧೀಶ್ವರ**

ತಾಲೂಕ- ಜೇವುರಗಿ ಜಿಲ್ಲಾ- ಗುಲಬುರ್ಗಾ

**ಇವರ ದಿವ್ಯಪಾದಂಗಳಿಗೆ ದಿವ್ಯಾಗಮದಸಾರ ಪ್ರಸಾದಿಸ್ಥಲದ
ಮಹಿಮೆ ಎಂಬ ಗ್ರಂಥವನ್ನು ಇವರ ಪಾದಕ್ಕೆ
ಕಾಣಿಕೆಯಾಗಿ ಸಮರ್ಪಿಸಿರುವೆ.**

ಗ್ರಂಥಕರ್ತರು-
**ಕೆ. ಎಸ್. ಹಿರೇಮಠ, ಕೆಂಭಾವಿ.**

# ಗ್ರಂಥ ಕರ್ತರ ಆತ್ಮನಿವೇದನ.

## ದಿವ್ಯಾಗಮದಸಾರ ಶೋಧಕರ ವಿಷಯ.

ಪರಮಾತ್ಮನು ಷಣ್ಮುಖನಿಗೆ ಈ ದಿವ್ಯಾಗಮದಲ್ಲಿದ್ದ ಪ್ರಸಾದಿ ಸ್ಥಲದ ವಿಷಯವನ್ನು ಹೇಳಿದ್ದಾನೆ ಮತ್ತು ಇದೇ ವಿಷಯವನ್ನು ಕಲ್ಯಾಣಪಟ್ಟಣದಲ್ಲಿ ಚನ್ನಬಸವಣ್ಣನಿಗೆ ಪ್ರಭುದೇವರು ಹೇಳಿದ್ದಾರೆ. ಈ ದಿವ್ಯಾಗಮವು ನಮ್ಮ ಕೆಂಭಾವಿ ಹಿರೇಮಠದಲ್ಲಿ ಕಂತೆಯ್ಯಸ್ವಾಮಿ ಚರಪಟ್ಟದ್ದೇವರು ಅವರ ತರುವಾಯ ಘನವೃಷಭೇಂದ್ರಸ್ವಾಮಿ ಚರಪಟ್ಟದ್ದೇವರು ಇವರು ಈ ವಿಷಯವನ್ನು ನೋಡುತ್ತಿರಬಹುದು. ಆವಾಗ್ಗೆ ನಾನು ಸಣ್ಣವನಿದ್ದೆ ಅವರು ಕೈಲಾಸವಾಸಿಯಾಗಿ ಅಂದಾಜು ೬೦ ವರ್ಷ ಆಗಿರಬಹುದು. ಆಗಿನ ಕಾಲಕ್ಕೆ ಮುದ್ರಣ ಮಾಡಿಸಬೇಕೆಂಬ ಇಚ್ಛೆಯು ಅವರಿಗೆ ಸಾಧ್ಯವಾಗಲಿಲ್ಲ ಈ ಗ್ರಂಥವು ನನ್ನ ಕೈಗೆ ಸಿಗುವದರಿಂದ ಹಳೇ ಕೋರಿ ಕಾಗದಮೇಲೆ ಬರದಿರುವದು ಹಾಗೂ ಹಿಂದಿನ ಹಳೇಗನ್ನಡ ಅಕ್ಷರಗಳು ಹಾಗೂ ಈ ಗ್ರಂಥವು ಸಂಸ್ಕೃತದಲ್ಲಿ ಇರುವದು. ಇದನ್ನು ನನ್ನ ಬುದ್ಧಿಗೆ ಬಂದಷ್ಟು ಈ ಗ್ರಂಥಕ್ಕೆ ಭಾವಾರ್ಥವನ್ನು ಬರದಿದ್ದೇನೆ. ಇದರಲ್ಲೇನಾದರೂ ದೋಷಗಳಿದ್ದರೆ ಬಲ್ಲಂಥ ಷಟ್‌ಸ್ಥಲ ಬ್ರಹ್ಮಜ್ಞಾನಿಗಳು ಹಂಸಕ್ಷೀರ ನ್ಯಾಯದಹಾಗೆ ತಪ್ಪನ್ನು ತಿದ್ದಿ ತಿಳುಹಬೇಕು. ಈ ದಿವ್ಯಾಗಮದಲ್ಲಿ, ಸಿದ್ಧಾಂತವು, ವೇದಾಂತವು, ಷಟ್‌ಸ್ಥಲವು, ತತ್ವಗಳು, ತತ್ವಮಸಿವಾಕ್ಯಗಳು ಅಂಗ ಲಿಂಗ ಸಾಮರಸ್ಯವು, ಜೀವ ಶಿವರೈಕ್ಯವು, ಅಡಕವಾಗಿರುವವು. ನೀವು ಬಲ್ಲವರು ಓದಿ ಆನಂದ ಪಡಬೇಕೆಂಬ ನನ್ನ ಇಚ್ಛೆಯು ಇರುವದು. ಇದೇ ನನ್ನ ವಿನಂತಿ.





ವೇ. ಕಂತಯ್ಯಸ್ವಾಮಿ ಹಿರೇಮಠ,
ಕೆಂಭಾವಿ.



ಶ್ರೀ. ಮಹಾಂತಪ್ಪ ಶಿವರುದ್ರಪ್ಪ ಗೊಂಗಡಶೆಟ್ಟಿ, ಇಲಕಲ್ಲ.

ಓಂ ತತ್ವಮಸಿ ೧

ಗುರುರ್ದೇವೊ ಮಹದೇವೊ ಗುರುದೇವೋ ಸದಾಶಿವಃ
ಗುರುರ್ದೈವತ್ ಪರನ್ನಾಸ್ತಿ ತೃಸ್ಮೈ । ಶ್ರೀ ಗುರುವೇನಮಃ ||

# ದಿವ್ಯಾಗಮದಲ್ಲಿ ಹೇಳಿದ ಪ್ರಸಾದಿ ಸ್ಥಲದ ಮಹಿಮೆಯನ್ನು ಬರಿಯುವದಕ್ಕೆ ಪ್ರಾರಂಭವು.

ಕಾಯ ಪ್ರಸಾದ ಕರಣ ಪ್ರಸಾದ ಜೀವ ಪ್ರಸಾದ ನಿಜ ಪ್ರಸಾದವ ನರಿಮುಕೊಂಬ ಪ್ರಸಾದಿ ಸ್ಥಲದ ದೇವರೆಂದು ತಿಳಿಯಬೇಕು. ಪಾದೋದಕ ಅಂದರೇನು? ಪರಾತ್ಪರಆನಂದವೆಚ್ಚಿ ಧ್ಭಿಂದುವೇ ಪಾದೋದಕ ಶ್ರೀಗುರುವಿನ ದ್ವಿಪಾದವೇಭ್ರೂಮಧ್ಯ ಸ್ಥಾನದಲ್ಲಿರ್ದುದನರ್ಚಿಸಿ, ಚಿದಾನಂದ ಬಿಂದು ತೊಟ್ಟುಟ್ಟಿದೇ ಪಾದೋದಕ. ಪ್ರಕಾಶವೆ ಪರಾತ್ಪರ ನಾಮ ಉಳ್ಳದ್ದು ಪರ ಬ್ರಹ್ಮವು ಪರಮಾನಂದ ಸ್ವರೂಪವು ದೋಕಾರವೇ ತೋಎಂಬ ನಾಮ ಉಳ್ಳದ್ದು. ದುರಿತ ನಾಶವು ದಕಾರವೆ ದಶದಿಶ ಭರಿತ ಪೂರ್ಣ ಚಿದಾಂಬುಧಿ ಮತ್ತುದಯ ದೋರಿತ್ತು, ಪರಮ ಜ್ಞಾನವು ಕಕಾರವೇ ಕರ್ಮನಾಶ ವೆನಿಸಿತ್ತು ಬಹು ರೂಪಿಣಿ ಚಿದಾಕಾರ ವೆನಿಸಿತ್ತು. ಇಂಥಾ ಪಾದೋದಕ ನೀಡಿದಾತನೆ ಗುರುಲಿಂಗ ಜಂಗಮವೆನ್ನಬಹುದು ಇಂಥಾ ಪಾದೋದಕ ಕೊಂಡರೆ, ಕಾಯ ಶುದ್ಧಿ, ಕರಣ ಶುದ್ಧಿ, ಜೀವ ಶುದ್ಧಿ, ಭಾವಶುದ್ಧಿ ಆಗುದು, ಅಚ್ಚ ಪ್ರಸಾದ, ನಿಚ್ಚ ಪ್ರಸಾದ, ಸಮಯ ಪ್ರಸಾದ, ಏಕ ಪ್ರಸಾದವು ಈ ನಾಲ್ಕು ಪ್ರಕಾರದ ಪ್ರಸಾದ ನಿರ್ಣಯವು ಅಚ್ಚ ಪ್ರಸಾದ ಎಂಬುವದೇ ನಿಚ್ಚಲ ನಿರ್ವಯಲಕ್ಕೆ ನಾಮವು ನಿಚ್ಚ ಪ್ರಸಾದ ಎಂಬುವದೇ ಶೃತಿ ಗುರು ಸ್ವಾನುಭಾವದಿಂದರಿದು ನಿಶ್ಚಯವಾದದ್ದು. ನಿಚ್ಚ ಪ್ರಸಾದವು ಸಮಯ ಪ್ರಸಾದವೆಂಬುವದೇ ಅಂಡ ಪಿಂಡಬ್ರಹ್ಮಾಂಡಗಳಿಗೆ ಏಕ ರಸಮಯವಾಗಿ ತತ್ವಮಸ್ಯಾದಿ ವಾಕ್ಯಂಗಳನರಿದು ಸರ್ವವು ಖಲ್ವಿದಂಬ್ರಹ್ಮವೆಂದು ತಿಳಿದು ಏಕ ಮೇವನೆ ದ್ವಿತಿ ಎಂಬ ವಚನಕ್ಕೆ ಸರಿಯಾದುದೇ ಏಕ ಪ್ರಸಾದವೆಂದು

ತಿಳಿಯುವದು. ಪ್ರಸಾದ ವೆಂಬುವದು ನಿರ್ಮಾಯನ ಮುಖದಿಂದುದ್ಭವ ವಾದದ್ದು. ಚಿಚ್ಛಕ್ತಿಯಿಂದಾದ ಮಹಾಲಿಂಗವಾಯ್ತು. ಮಹಾಲಿಂಗದುದ್ಭವ ಇದರಿಂದ ಪ್ರಸಾದ ಲಿಂಗವಾಯ್ತು, ಇದರಿಂದ ಜಂಗಮ ಲಿಂಗವಾಯ್ತು, ಇದರಿಂದ ಶಿವಲಿಂಗವಾಯ್ತು, ಇದರಿಂದ ಗುರು ಲಿಂಗವಾಯ್ತು, ಇದರಿಂದ ಆಚಾರ ಲಿಂಗವಾಯ್ತು,

ಈ ಷಡ್ವಿಧಲಿಂಗವು ಪ್ರಸಾದದಿಂದ ಉದ್ಭವಿಸಿದವು ಈ ೬ರು ಲಿಂಗಗಳಿಂದಲೇ ಜಗತ್ ಉದ್ಭವಿಸಿತು. ಲಿಂಗ ಮಧ್ಯ ಸರ್ವಂಜ್ಜಗತ್ ತ್ರೈಲೋಕ್ಯ ಸಚರಾಚರಂ ಲಿಂಗಬಾಹ್ಯ ಪರಂನಾಸ್ತಿ ತಸ್ಮೈಲಿಂಗಪರಿ ಪೂಜಯೇತ್ ಪ್ರಸಾದವೆ ಕಾಯ ಜೀವ ಪ್ರಾಣವಾಯ್ತು ಕಾಯವೆ ಇಷ್ಟ ಲಿಂಗ ಜೀವವೆ ಪ್ರಾಣ ಲಿಂಗ. ಭಾವವೆ ತೃಪ್ತಿ ಲಿಂಗವಾಯ್ತು ಪೃಥ್ವಿ ಅಪ್ಪು ಕೂಡಿ ಕಾಯವಾಯ್ತು. ಅಗ್ನಿ ವಾಯು ಕೂಡಿ ಪ್ರಾಣ ಲಿಂಗ ವಾಯ್ತು. ಆಕಾಶ ಓಂಕಾರ ಭಾವ ಲಿಂಗವಾಯ್ತು. ಆರು ಹಸ್ತಗಳು ಆರು ಸ್ಥಲಗಳು. ಆರು ಚಕ್ರಗಳು. ಪ್ರಸಾದದಿಂದಲೇ ತೋರಿದವು. ಭಕ್ತ ಮಹೇಶ. ಪ್ರಸಾದಿ ಈ ಮೂರು ಸ್ಥಲಗಳು ಕ್ರಿಯಾರೂಪಗಳು. ಪ್ರಾಣ ಲಿಂಗಿ-ಶರಣ ಐಕ್ಯ ಈ ಮೂರು ಸ್ಥಲಗಳು ಜ್ಞಾನರೂಪಗಳು. ಮೊದಲಿನ ಮೂರು ಸ್ಥಲಗಳು ಇವುಗಳನ್ನು ಸ್ವಚ್ಛವಾಗಿಡಬೇಕಾಗಿರುವದು. ಮೇಲಿನ ಮೂರು ಸ್ಥಲಗಳು ಯಾವಾಗಲೂ ನಿರ್ಮಲರೂಪಗಳಾಗಿರುವವು. ಅಸ್ತಿ ಅನುಪಮ, ಮಾಂಸ ಮಂತ್ರರೂಪ. ಚರ್ಮ ಚಿದ್ರೂಪ. ನಾಡಿನಿರಂಜನ ರೋಮಯೋಮರೂಪವಾಯ್ತು ಓಂಕಾರ ತ್ವಕ್ಕಿನಲ್ಲಿ, ಇದು ಮಹಲಿಂಗ ನಕಾರ ರಕ್ತದಲ್ಲಿ ಆಚಾರಲಿಂಗ. ಮಕಾರವೇ ಮಾಂಸದಲ್ಲಿ ಇದು ಗುರಲಿಂಗ ಶಿಕಾರವೇ ಮೇಧಸ್ಸಿನಲ್ಲಿ ಶಿವಲಿಂಗ. ವಕಾರವೇ ಅಸ್ತಿಯಲ್ಲಿ ಜಂಗಮಲಿಂಗ ಯಕಾರವೇ ಮಜ್ಜೆಯಲ್ಲಿ ಪ್ರಸಾದಲಿಂಗ. ಸತ್ತುಆಚಾರಲಿಂಗ, ಚಿತ್ತು ಗುರುಲಿಂಗ. ಆನಂದಶಿವಲಿಂಗ, ನಿತ್ಯಜಂಗಮಲಿಂಗ, ಪರಿಪೂರ್ಣವೇ ಪ್ರಸಾದಲಿಂಗ, ಅಖಂಡಸ್ವರೂಪವೇ ಮಹಲಿಂಗ, ಇಂಥಾ ಪಂಚಭೂತ ಕಾಯಪ್ರಸಾದದಿಂದಾಯ್ತು. ಮಾಂಸಪಿಂಡವೆಂದು ಮಂತ್ರ ಪಿಂಡವಾಯ್ತು ವಾಯುಪ್ರಾಣಲಿಂಗ ಪ್ರಾಣಿಯಾಯ್ತು ಈ ಪ್ರಸಾದಕೊಂಡ ಶರಣನ ದೇಹವೆಲ್ಲ ಪ್ರಸಾದರೂಪವಾಯ್ತು. ಈ ಪ್ರಸಾದವೇ ಕೋಟಿಲಿಂಗವಾಯ್ತು. ನಾಸಿಕಕ್ಕೆ ಆಚಾರಲಿಂಗ ಗಂಧಪ್ರಸಾದ. ಗುರುಲಿಂಗಷಡ್ರುಚಿ-ಷಡಕ್ಷರಿ

ಮಂತ್ರನಾದ. ಅಗ್ನಿಯೆ ಶಿವಲಿಂಗ. ದೃಗ್‌ದೃಶ್ಯವೇ ಜಂಗಮಲಿಂಗ. ಘಟಾ
ಕಾಶ ಮಹಾಕಾಶ ಬಿಂದ್ವಾಕಾಶ ಚಿದಾಕಾಶ ಯೋಮಕಾಶ. ಶ್ರೋತ್ರಾದಿ
ಲಿಂಗನಾದ ಪ್ರಸಿದ್ಧಿಜೀವಾತ್ಮ ಅಂತರಾತ್ಮ ಪರಮಾತ್ಮ ಸರ್ವೇಂದ್ರಿ ತೃಪ್ತಿಯೆ
ಮಹಾಲಿಂಗ ಪ್ರಸಾದಕೊಂಡ ಶರಣಸರ್ವಾಂಗವೆಲ್ಲವು. ಆತನು ವಾಸಿಸಿ
ದೆಲ್ಲಾ ಆಚಾರಲಿಂಗದ್ದು. ಆತನು, ರಚಿಸಿದೆಲ್ಲಾ ಗುರುಲಿಂಗದ್ದು. ಆತನು
ನೋಡಿದ್ದೆಲ್ಲಾ ಶಿವಲಿಂಗದ್ದು. ಆತನು ಸ್ಪರ್ಶಮಾಡಿದ್ದೆಲ್ಲಾ ಜಂಗಮ
ಲಿಂಗದ್ದು. ಆತನು ಕೇಳಿದ್ದೆಲ್ಲಾ ಪ್ರಸಾದಲಿಂಗದ್ದು. ಶರಣ ಶರೀರವು ಹೀಗೆ
ಇರುವದು. ಸಕಲಸೃಷ್ಟಿಯು ನೊಳಗೊಂಡ ಮೂಲಕಂದವು ತಾನೇ ಪಿಂಡ
ಅಂಡಬ್ರಹ್ಮಾಂಡ ಚಿದಾಂಡ. ಮಹಾಂಡ. ಕರಂಡ ತನ್ನೊಳಗೆ ಗರ್ಭೀ
ಕರಿಸಿಕೊಂಡಿರುವದು. ಸತ್ತು. ಚಿತ್ತು. ಆನಂದ ನಿತ್ಯಪರಿಪೂರ್ಣ.
ನಿರ್ಮಾಯ ಪ್ರಸಾದಮೂರ್ತಿಯೇ ಹೀಗಾಗಿರುವದು. ಶಿವಶಕ್ತಿ ಸ್ನೇಹವು
ನಾಸ್ತಿ ಅಣುಮಾತ್ರವಿಲ್ಲ. ಸ್ತ್ರೀಲಿಂಗ ಪುಲ್ಲಿಂಗ. ನಪುಂಸಕಲಿಂಗ ವಿಲ್ಲದೆ
ಅವಯೋನಿಯಲ್ಲಿ ಜನಿಸದೆ. ಸ್ವಯಂಭು; ತಾನೆ ಯಾಗಿರುವದು. ನಾಮವು
ಇಲ್ಲ ರೂಪವಿಲ್ಲ ವರ್ಣವಿಲ್ಲ. ಕ್ರಿಯವಿಲ್ಲ. ಪಂಚತತ್ವಗಳಿಲ್ಲ. ಪಂಚ
ಮೂರ್ತಿಗಳಿಲ್ಲ. ನಾದಬಿಂದುಕಳೆಗಳಿಲ್ಲ. ಪ್ರಸಾದ ವಂದೇಯಲ್ಲದೇ ಮತ್ತೇನು
ವಿಲ್ಲವು. ಮಡಿಕೆಗೆ ಮಣ್ಣೇ ಮೊದಲು. ವಡವಿಗಳಿಗೆ ಹೊನ್ನೇ ಮೊದಲು
ಬ್ರಹ್ಮಾಂಡಕ್ಕೆ ಪಂಚಭೂತಗಳೇ ಮೊದಲು ಈಭೂತಗಳಿಗೆ. ಆತ್ಮನೇ
ಮೊದಲು ಈ ಆತ್ಮನಿಗೆ ಪ್ರಸಾದ ರೂಪಿಯಾದ ಪರಮಾತ್ಮನೇ
ಮೊದಲು ಈತನೇ ಶಬ್ದಬ್ರಹ್ಮನು. ಈತನಿಗೆ ಮಾಯಾವರಣವು
ಇದರಿಂದಲೇ ಶಬ್ಧರೂಪವಾಯ್ತು. ಈ ಪರಮಾತ್ಮ ಮಾಯಾಗಳಿಗೆ ನಿಶ್ಶಬ್ದ
ಬ್ರಹ್ಮವೇ ಮೊದಲು ತಾನೆಗುರು ತಾನೆಲಿಂಗ–ಜಂಗಮ ಪರಶಿವನು ತಾನೆ
ತಾನೇ ದೇವಭಕ್ತನಾದವನಿಗೆ ಪ್ರಸಾದವೆಂದು ಹೇಳಲ್ಪಟ್ಟಿತು. ತಾನೆ
ಕರ್ತೃ. ತಾನೆ ಭೃತ್ಯ ತಾನೆ ದಾತ ತಾನೇ ಭಕ್ತ ತಾನೆ ಮಾತಾ ತಾನೆ
ಪಿತನಾದವನು. ಪರಾತ್ಪರ ಪರಬ್ರಹ್ಮ ಅಖಂಡ ಅದ್ವಯ ಅಗ್ಗ ಅಗೋಚರ
ಅಸಂಖ್ಯ ಅಚಿತ ಅವರ್ಣ ಅಲೇಖ ಅನಂತರೂಪ ಪ್ರಸಾದದಿಂದಲೇ
ಆಗಿರುವದು. ಬ್ರಹ್ಮಾಂಡವೆಂದರೆ ಆಪರವೆಂಬರ್ಥ. ಪರಬ್ರಹ್ಮವೆಂದರೆ
ಆಸಿ ಪದವೆಂದರೆ ಪಿಂಡಾಂಡ ಬ್ರಹ್ಮಾಂಡ ಐಕ್ಯವೆಂಬರ್ಥವು ಅಖಂಡ

ಖಂಡಿತವಿಲ್ಲ. ಪಿಂಡಬ್ರಹ್ಮಾಂಡಕ್ಕೆ ಐಕ್ಯವೆಂಬರ್ಥವು. ಅಖಂಡಖಂಡಿತವಿಲ್ಲ. ಖಂಡಿತವಿಲ್ಲ. ಪಿಂಡಬ್ರಹ್ಮಾಂಡಕ್ಕೆ ಬೀಜಾಕ್ಷರಮೂಲಪ್ರಣವುವಂದೇ ಆಗಿರುವದು. ಇದೇ ಪ್ರಣವು ರೂಪವಾಯ್ತು. ನಾಮರೂಪ ಕ್ರಿಯ ಕರ್ಮಂಗಳೆಂಬ ಶೀವಿಗೆ ನಿಃಶ್ರೀಯ ಪ್ರಸಾದವೆಂದು ಹೇಳಲ್ಪಟ್ಟಿತು ಸತ್ತುಗುರು ಚಿತ್ತುಲಿಂಗ ಆನಂದ ಜಂಗಮ ನಿತ್ಯ ಪ್ರಸಾದ ಪರಿಪೂರ್ಣವೇ ಪಾದೋದಕ ತನ್ನ ಸ್ವಭಾವವೇ. ಇಪ್ಪತ್ತೈದು ಗಣವೆನಿಸಿರುವದು, ಸಚ್ಚಿದಾನಂದಮಯನಾದ ಘನ ಅಖಂಡೈಕ್ಯರಸಮಯನಾದ- ಆದಿಮಧ್ಯಾಂತರಹಿತ. ಆದಿಗುರು. ಮಧ್ಯಲಿಂಗ.ಅಂತ್ಯ ಜಂಗಮವಾಗಿರುವದು. ಪ್ರಣವು ವೆಂದರೆ ಅನಾಹತ ಅನಾಹತವೆಂದರೆ ಬಡಿನಲ್ಲದೆ ಶಬ್ಧವಾಗಿರುವದು ಪ್ರಸಾದ ವಾಕ್ಯ. ಈ ಪ್ರಸಾದ ವೇದಶನಾದವಾಗಿರುವದು. ಚಿತ್ಪದವೇನಾದನಾದ ಒಲಿದು ಮೂಲ ಪ್ರಕೃತಿಯಾಯ್ತು ಈ ಪ್ರಕೃತಿಯು ವಿಕೃತಿಹೊಂದಿ ಸೃಷ್ಟಿಯಾಯ್ತು ಇದೆಲ್ಲಾ ಪ ಸಾದದಿಂದ ಪ್ರಕೃತಿ ಪುರುಷವೆಂದಾಯ್ತು ಮತ್ತು ಪರಮನ ಸತ್ತು ಚಿತ್ತೆಂಬೆರಡವು ಪ್ರಕೃತಿ ಪುರುಷವಾಯ್ತು ಸತ್ತೆಮಾಯಾವಂಶ ಇದು ಪ್ರಕೃತಿ ಚಿತ್ತೆ ಪುರುಷವಾಯ್ತು. ಈ ಪ್ರಸಾದ ದಿಂದಲೇ ಆ ಪ್ರಕೃತಿ ಪುರುಷರಿಂದಲೇ ಶಿವಶಕ್ತಿಯಾಯ್ತು ಪ್ರಕೃತಿಯೆಂದರೆ ಸೂಕ್ಷ್ಮ ಶರೀರ ಮತ್ತು ಪ್ರಾಣ ಮನಸಂಯೋಗವೆ ಪ್ರಕೃತಿಯು ಪುರುಷನೆಂದರೆ ಜೀವನು ಇದು ಪ್ರಸಾದದಿಂದಲೇ ಆಗಿರುವದು ಈ ಶಿವಶಕ್ತಿಗಳಿಂದಲೇ ಮೂರು ಗುಣಗಳು ಹುಟ್ಟಿದವು. ಇದರಿಂದಲೇ ಭೂತಾಹಂಕಾರ ರಾಜಸಾಹಂಕಾರ ಸಾತ್ವಿಕಾಹಂಕಾರವಾಯ್ತು ಇವೇ ಸತ್ವ ರಜ ತಮ ಗುಣಗಳೆಂಬ ಮೂರು ಗುಣಗಳಾದವು. ಈ ಅಹಂವೆಂಬುವದೇ ಮಾಯ ಮಾಯೋ ಪಾಧಿಯ ಬ್ರಹ್ಮ ಆ ಮಾಯ ಸಮ್ಮತವೆಂದು ಹೇಳಲ್ಪಟ್ಟಿ 'ು ಮಹಾ ಪ್ರಸಾದವೇ ಮಹಾತ್ಮವಾಯ್ತು. ಆ ಮಹಾತ್ಮನೇ ಮಹಾ ಜ್ಯೋತಿಯಾಯ್ತು ಆ ಮಹಾ ಜ್ಯೋತಿಯ ಪ್ರಕಾಶಾಬ್ಧಿಯಾಯ್ತು. ಆ ಪ್ರಭಾರ್ನವೇ ಮಹಾತತ್ಪದವಾಯ್ತು ತತ್ಪದವೇ ಮಹೇಶ್ವರನೆಂದದು ಪ್ರಸಾದ ವಾಕ್ಯ ಅಗುಣಿ ಕ್ಷೋಭಿಣಿಯ ಮಾಯ ಮಹದಂಕಾರವಾಯ್ತು. ಆ ಮಹದಂಕಾರವೇ ಮೂಲ ಪ್ರಕೃತಿ ಆ ಮೂಲ ಪ್ರಕೃತಿಯೇ ಓಂಕಾರ

ವಾಯಿತ್ತು. ಅಕಾರದಿಂದ ಸಾತ್ವಿಕಾಹಂಕಾರ! ಉಕಾರದಿಂದ ರಾಜಸಾಹಂಕಾರ ಮಕಾರದಿಂದ ತಾಮಸಾಹಂಕಾರವಾಯಿತ್ತು. ಅಕಾರದಿಂದ ಬ್ರಹ್ಮನು ಉಕಾರದಿಂದ ವಿಷ್ಣು–ಮಕಾರದಿಂದ ರುದ್ರನು. ಈ ರುದ್ರನಿಂದ ಪಂಚಮಹಾಭೂತಗಳು ಹುಟ್ಟಿದವು ಈ ಪಂಚಮಹಾಭೂತಗಳಿಂದ ಶಬ್ದಾದಿತನ್ಮಾತ್ರೆಗಳು ಹುಟ್ಟಿದವು. ವಿಷ್ಣುವಿನ ರಜೋಗುಣದಿಂದ ಪಂಚ ಅಂತಃಕರಣಗಳು ಹುಟ್ಟಿದವು ಮತ್ತು ಸೂರ್ಯನಧಿ ದೇವತಗಳು ಹುಟ್ಟಿದವು. ಬ್ರಹ್ಮನ ಸತ್ವಗುಣದಿಂದ ಶ್ರೋತ್ರಾದಿ ಜ್ಞಾನೇಂದ್ರಿಗಳು, ಮತ್ತು ಕರ್ಮೇಂದ್ರಿಗಳು ಹುಟ್ಟಿದವು. ಅ ಉ ಮಕಾರ ಕೂಡಿ ಓಂಕಾರವಾಯಿತ್ತು. ಈ ಮೂರು ಅಕ್ಷರಗಳಿಂದ ನಾದ ಬಿಂದು ಕಳೆಗಳಾದವು. ಈ ಮೂರು ಅಕ್ಷರಗಳು ಕೂಡಿ ಪ್ರಕೃತಿ ಯಾಯಿತ್ತು ಈ ಪ್ರಕೃತಿಗೆ ಆಶ್ರಯವೆ ನೀನಿರುವಿ ಈ ಪ್ರಕೃತಿಯು ಪ್ರಾಣದ ಆಧಾರದ ಮೇಲೆ ಇರುವದು. ಈ ಪ್ರಾಣಕ್ಕೆ ಲಿಂಗವೇ ಅಧಾರ ಈ ಲಿಂಗಕ್ಕೆ ವಸ್ತುವೇ ಅಧಾರ ಈ ವಸ್ತುವಿಗೆ ನೀನೇ ಆಧಾರ ವೆನಿಸಿರುವದು ಅಕಾರವೆಂದರೆ ಮೂಲಾಧಾರಕ್ಕೆ ಇಳಿಯಿತು. ಉಕಾರವೆಂದರೆ ಮಧ್ಯಕ್ಕೆ ನಿಲ್ಲುವದು. ಮಕಾರವೆಂದರೆ ಕಂಠಕ್ಕೆ ನಿಲ್ಲುವದು ಈ ಮೂರು ಅಕ್ಷರಗಳಿಗೆ ಬಿಂದು ಕೂಡಿದರೆ ಶಿವ ಶಕ್ತಿಗಳಾದವು ಅಕಾರವೇ ಈ ಎರಡಕ್ಷರಗಳಿಗೆ ಆಧಾರ ಸ್ವರೂಪವಾಗಿರುವದು. ಸ್ಥೂಲ ಸೂಕ್ಷ್ಮ ಕಾರಣ ಶುದ್ಧ, ಶಿದ್ಧ, ಪ್ರಶಿದ್ಧ ದಿಂದಲೇ ಮೂರು ಶರೀರಗಳಾಗಿರುವವು. ಮತ್ತು ಮಾಯಾ, ಮಲ ಕಾರ್ಮಿಕಮಲ, ಅಣವ ಮಲಗಳಿಂದ ಮೂರು ಶರೀರಗಳಾಗಿರುವವು. ಈ ಮೂರು ಶರೀರಗಳಿಂದ ವಿಶ್ವ, ತೈಜಸ, ಪ್ರಾಜ್ಞರುಗಳು ಜನಿಸಿರುವರು. ಇಂಥಾ ವಸ್ತುವಿನಿಂದಲೇ ನಾದ ಹುಟ್ಟಿತು. ಈ ನಾದದಿಂದ ಪ್ರಾಣ ಹುಟ್ಟಿತು ಈ ಪ್ರಾಣದಿಂದ ಪ್ರಕೃತಿ ಜನಿಸಿತ್ತು. ಈ ಪ್ರಕೃತಿಯಿಂದ ಪುರುಷ ಜನಿಸಿತ್ತು ಮತ್ತು ಈಶ್ವರನು ಹುಟ್ಟಿದನು. ಈ ಕಾರಣ ದೇಹವೇ ಮೂಲ ಪ್ರಕೃತಿಯೇ ಆಗಿರುವದು. ಪ್ರಕಾರವೇ ಅಸಿಪದ ಸಾಕಾರವೆ ತತ್ಪದ. ದಕಾರ ನಿರ್ವಿಕಾರವಾಯಿತ್ತು. ತತ್ಪದವೇ ಈಶ್ವರನು. ಈಶ್ವರನೇ ವಿರಾಟ್ ಪುರುಷನ ಸ್ಥೂಲದೇಹ ಹಿರಣ್ಯ ಗರ್ಭನೇ ಈಶ್ವರನ ಸೂಕ್ಷ್ಮ ಶರೀರ, ಅವ್ಯಕೃತ ಈಶ್ವರನೇ ಕಾರಣ ದೇಹ ಸ್ಥೂಲ ದೇಹದಲ್ಲಿ ಉತ್ಪತ್ತಿ

ಸೂಕ್ಷ್ಮ ಶರೀರದಲ್ಲಿ ಸ್ಥಿತಿ. ಕಾರಣ ದೇಹದಲ್ಲಿ ಲಯ ತ್ರಿವಿಧದರುವೆ ಮಹಾ ಕಾರಣ ದೇಹ. ಬ್ರಹ್ಮ ವಿಷ್ಣು ರುದ್ರರುಗಳಿಗೆತಾ ಸಾಕ್ಷಿ ಕ್ರಿಯಾ ಶಕ್ತಿ ಇಚ್ಛಾ ಶಕ್ತಿ, ಜ್ಞಾನಶಕ್ತಿಗಳಿಗೆತಾ ಸಾಕ್ಷಿ ಸ್ಥಾನ ಭೋಗಂಗಳಿಗೆತಾ ಸಾಕ್ಷಿ ವಿಶ್ವ ರೂಪನೇ ಕಾರಣ ಸರ್ವೇಶ್ವರನೇ ಮಹಾಕಾರಣ ದೇಹವೆಂದರಿಯುವದು. ಸರ್ವಕರ್ತೃತ್ವ ಸರ್ವಸಂಹಾರತ್ವ ಸರ್ವ ಭೋಕ್ತೃತ್ವ. ಸರ್ವಾಂತರ್ಯಾ ಮಿತ್ವ ಸರ್ವೇಶ್ವರತ್ವವು ಇದೆಲ್ಲ ಪ್ರಸಾದ ವಾಕ್ಯ.

ಸದ್ಯೋಜಾತ ಮುಖದಿಂದ ಭೂಮಿ ಹುಟ್ಟಿತು. ವಾಮದೇವ ಮುಖದಿಂದ ಆಪು ಹುಟ್ಟಿತು. ಅಘೋರಮುಖದಿಂದ ಅಗ್ನಿ ಹುಟ್ಟಿತು. ತತ್ಪುರುಷ ಮುಖದಿಂದ ವಾಯು ಹುಟ್ಟಿತು. ಈಶಾನ್ಯ ಮುಖದಿಂದ ಆಕಾಶ ಪುಟ್ಟಿತು. ಈ ಪಂಚ ತತ್ವಗಳು ಹುಟ್ಟಿದವು.

ಪಿಂಡ ಬ್ರಹ್ಮಾಂಡಗಳಿಗೆ ಪಂಚ ಭೂತಗಳೇ ಕಾರಣವು. ಈ ಪಂಚ ಭೂತಂಗಳಿಗೆ ಈಶ್ವರನೇ ಕಾರಣ. ಈ ಈಶ್ವರಂಗೆ ತತ್ಪದವೇ ಕಾರಣ ಆ ತ್ಪತದಕ್ಕೆ ತ್ವಂಪದವೇ ಕಾರಣ ಆತ್ವಂಪದಕ್ಕೆ ಪ್ರಸಾದವೆಕಾರಣ, ಆ ತತ್ವದಕ್ಕೆ ತ್ವಂಪದಕ್ಕೆ ಮೂಲ ಪ್ರಕೃತಿಯೇ ಕಾರಣ. ಈ ಮೂಲ. ಪ್ರಕೃತಿಗೆ ಮೂಲ ಚೈತನ್ಯವೇ ಕಾರಣ. ಆ ಚೈತನ್ಯವೇ ವ್ಯಾಪಿಸಿದ ಕಾರಣ ಮಾಯೋಪಾಧಿಈಶ್ವರ ನೆನ್ನಿಸಿರುವನು. ಪ್ರಸಾದದಿಂದ ಶಿವಜೀವಗೈಕ್ಯವೆಆಶಿಪದವೆನಿಸಿಶುವದು. ಈ ದೇಹದಿಂದ ಪ್ರಸಾದ ಜನಿಸಿತ್ತು. ದೇಹ ಪ್ರಸಾದ ಕೂಡಿ ಮಹಾ ಪ್ರಸಾದ ಪರವಸ್ತುವಾಯ್ತು. ಎಲ್ಲೆಲ್ಲಿ ಇಂದ್ರಿಗಳೇ ಅಲ್ಲಲ್ಲೆಲಿಂಗ ಅಲ್ಲಲ್ಲೆ ಜಂಗಮ ಅಲ್ಲಲ್ಲೆ ಪ್ರಸಾದ ಅಲ್ಲಲ್ಲೆ ಶಿವನೆಂದು ಹೇಳಿತು. ಯಲ್ಲಿ ಶಿವನೋ ಅಲ್ಲೆ ಬ್ರಹ್ಮಾಂಡ ಪಿಂಡಾಂಡ ವಹುದು. ಅಲ್ಲೆ ಜಂಗಮ ವಿಹುದು, ಅಲ್ಲೇ ಪ್ರಸಾದ ವಿಹುದು. ಈ ಪ್ರಸಾದದಿಂದಲೇ ಶಿವನು. ಪ್ರಸಾದ ದಿಂದಲೇ ಶಕ್ತಿಯಾಯ್ತು ಇದರಿಂದ ರೂಪವಾಯ್ತು. ಇದರಿಂದ ನಾಮವಾಯ್ತು. ಪ್ರಸಾದವೇ ಜಂಗಮ ಲಿಂಗವಿಹುದು ಅಲ್ಲೇ ಪ್ರಸಾದವೇಲೇಣು ಈ ಪ್ರಸಾದದಿಂದಲೇ ಪರಮ ಪದವಕ್ಕು. ಪ್ರಸಾದಂಗದಕ್ಷ ಮಲ ದೇಹ ವಿಹುದೆ ಮಂತ್ರ ಸಂಸ್ಕಾರ ಪಿಂಡದಲ್ಲಿ ಮಾಂಸ ಪಿಂಡ ವಹುದೇ ಅವನೊಬ್ಬ ಭಕ್ತನು ಭೋಗಾರ್ಪಣ ಲಿಂಗವೇ ತೃಪ್ತಿಗೊಂಬುವದೆಂದು ತನ್ನ

ಸ್ತ್ರೀಯಳು ಪುರುಷನು ಭೋಗಾರ್ಪಣ ಬೈಷಿ ಭುಂಜಿಸಿ ತೃಪ್ತಿಯಾಗಿ ಮುಂದೆ ಶಿಸುವು ಬೆಳೆಯುವಂತೆ ಶರಣನ ಸರ್ವಸುಖ ಭೋಗ ಲಿಂಗವೆ ಭೋಗಿಪುದು.

ಸಮುದ್ರದಲ್ಲಿ ತೆರೆ ನೊರೆ ಗುರುಳಿಗಳು ತೋರುವಂತ ಪ್ರಸಾದ ವೆಂಬ ಸಮುದ್ರದಲ್ಲಿ ಲಿಂಗ ರೂಪು ವಿಶ್ವತೋಮುಖವಾಯ್ತು. ಶಿದ್ಧ ಪ್ರಸಾದ ವೇಗುರು ಶುದ್ಧ ಪ್ರಸಾದವೇ ಲಿಂಗ. ಪ್ರಶಿದ್ಧ ಪ್ರಸಾದವೇ ಜಂಗಮ ಪಿಂಡ ಬ್ರಹ್ಮಾಂಡಕ್ಕೆ ಸೂತ್ರಾಧಾರವೇ ಪ್ರಣಮವೇ, ಮಹಾ ಪ್ರಸಾದವೇ ಮಂತ್ರ ಮೂರ್ತಿ ಯಾಗಿರುವದು. ಗುರು ಲಿಂಗ ಜಂಗಮ ಪ್ರಸಾದ ಮೂರ್ತಿಯಿರ ದಿರುವದು. ಗುರು ಮುಖದಿಂದ ಗುರು ರೂಪುವಾಯ್ತು. ಲಿಂಗ ಮುಖದಿಂದ ರುಚಿ ಯಾಯ್ತು. ಜಂಗಮ ಮುಖದಿಂದ ಪರಿಣಾಮವಾಯ್ತು. ಇದರಿಂದ ಆನಂದವಾಯ್ತು. ರೂಪು, ರುಚಿ, ಪರಿಣಾಮವೇ ತಲೆಗೇರಿ ಮನ್ಮನ ಪದಾ ರ್ಥದೊಳಗಣರುಚಿಯನರಿದು ಸವಿ ವಿಹುದೆ ಸಾಕಾರವಿದು. ಆಕಾರವೇ ಕಾಯ. ನಿರಾಕಾರವೇ ಪ್ರಾಣಸಕಾಸವೇ ಜೀವಕಾಯ ಪ್ರಾಣಜೀವರೈಕ್ಯವು

ಆಕಾರಸ್ಥೂಲ ನಿರಾಕಾರವೇ ಸೂಕ್ಷ್ಮ ಸಾಕಾರವೇ ಕಾರಣ ಸವ್ಯ ಥಮಹಾ ಕಾರಣ ಕಾಯ ಶೇಷವೇ ಇಷ್ಟಲಿಂಗ ಶಿವ ಶೇಷವೇ ಪ್ರಾಣಲಿಂಗವು ಪ್ರಾಣ ಶೇಷವೇ ಭಾವಲಿಂಗ, ಮಹಾ ಪ್ರಸಾದವೇ ಭೋಗಿಸಲುಪಟ್ಟ ಮಹಾಲಿಂಗವಾಯ್ತು. ಆದಿಯೆಲಿಂಗ, ಅನಾದಿಯ ಜಂಗಮ, ಆದಿಯೆಂ ಬುವದೇಜೀವ ಅನಾದಿಯೆಂಬುವದೇಶಿವ. ಆದಿ ಅನಾದಿ ಕೂಡಿ ಪೂರ್ಣ ಪದ ವಾಯ್ತು. ಇದೇ ಅಸಿಪದವಾಯ್ತು. ಶಿವಜೀವರೈಕತ್ವವಾಯ್ತು. ಅಂಡ ವೆಂದರೆ ಶಿವ ಪಿಂಡವೆಂದರೆ ಜೀವ. ಬ್ರಹ್ಮಾಂಡವೆಂದರೆ ಚೈತನ್ಯ ಪರವಸ್ತು ತಾನೇ. ಅಂಡವೆಂದರೆ ಲಿಂಗ ಪಿಂಡವೆಂದರೆ ಗುರು ಬ್ರಹ್ಮಾಂಡವೆಂದರೆ ಜಂಗಮ ಬೋಧಿಸು ವದಕ್ಕೆ ಗುರುವಾದ ತನ್ನತಾನೇ ಪೂಜಿಗೊಂಬುವದಕ್ಕೆ ಲಿಂಗವಾಯ್ತು. ತಾನೇ ಸಕಲ ಭೋಗಂಗಳ ಪರಿಣಮಿಸುವದಕ್ಕೆ ಜಂಗಮ ವಾದ ಆಪ್ರಸಾದವೇ ಮೂರಕ್ಷರದಿಂದ ಗುರು ಲಿಂಗ. ಜಂಗಮರೂಪುನರ್ಪಿ ಸಿದ ಮೇಲೆ ರೂಪು ಚಿದ್ರೂಪವಾಯ್ತು. ರುಚಿಯನರ್ಪಿಸಿದ ಮೇಲೆ ರುಚಿ ಚಿನ್ಮಯವಾಯ್ತು. ಪರಿಣಾಮನರ್ಪಿಸಿದ ಮೇಲೆ ಪರಬ್ರಹ್ಮವಾಗಬೇಕೆ

ಶ್ಲೊಪುನರ್ಪಿಸಿದ ಮೇಲೆ ಆಕಾಯವು ಶುದ್ಧವಾಗಬೇಕು. ರುಚಿಯು ನರ್ಪಿಸಿದ ಮೇಲೆ ಆ ಜೀವನು ನಾನಾ ಯೋನಿಯಲ್ಲಿ ಬರುವದೇ ಹ್ಯಾಗೆ ಪರಿಣ್ಣಾಮನರ್ಪಿಸಿದಮೇಲೆ ಆ ಪ್ರಾಣ ಭ್ರವೆಗೊಳ್ಳುವದೇಕೆ. ವಾಸುದೇವ ಮುಖದಲ್ಲಿ ಪ್ರಸಾದ ಬಿತ್ತಲು ಸದ್ಯೋಜಾತ ಮುಖದಲ್ಲಿ ಬೆಳೆಯಾಯ್ತು ಪೃಥ್ವಿಯಲ್ಲಿ ಫಲವಾಯ್ತು ಧರ್ಮೇಂದ್ರಿಯಲ್ಲಿ ಪ್ರಸಾದ ಬಿತ್ತಿದರೆ ಕರ್ಮೇಂದ್ರಿಯಲ್ಲಿ ಬೆಳಿಯಿತು ಪೃಥ್ವಿಯಲ್ಲಿ ಫಲವಾಗಿರುವದು. ಸಕಲ ಧಾನ್ಯಾದಿಗಳೆಲ್ಲ ಸ್ಥಾವರವು ಜಂಗಮವೆಂದರೆ ಜೀವಹಿಂಶೆಮಾಡಲಾಗದು ಜಂಗಮಕ್ಕೆ ಸ್ಥಾವರಾರ್ಪಣವೆಂದು ಪ್ರಸಾದವಾಕ್ಯ ಸ್ಥಾವರವೆಂದರೆ ಭೂಮಿ ಈ ಸ್ಥಾವರಕ್ಕೆ ಜಂಗಮಾರ್ಪಣವೆಂದರಿವುದು. ಸ್ಥಾವರಜಂಗಮದಲ್ಲಿ ಲಿಂಗವೇ ಭಕ್ಷಿಪುದು. ತನ್ನ ಸತ್ವ ಮರೆದು ತನುಮಧನವೇ ಜೀವನವಾಗಿರುದೇ ಜೀವಾತ್ಮ ಪ್ರಕಾರ ಪರಮಾತ್ಮ ಸಾಕಾರ ಅಂತರಾತ್ಮ ದಕಾರ ಜೀವಾತ್ಮ ವಾಗಿರ್ಪವದು. ಸ್ಥಾವರಕ್ಕೆ ಅಳವುಂಟು ಅಂದರೆ ಈ ದೇಹಕ್ಕೆ ಅಳವುಂಟು ಮನವೇ ಬಜಂಗಮಕ್ಕೆ ಅಳವಿಲ್ಲ ಯಾಕಂದರೆ ಇಲ್ಲಿಯು ಭೋಗಾದಿಗಳನ್ನುಂಡು ಪಾಪ ಪುಣ್ಯಗಳನ್ನು ಮಾಡಿ ಸ್ವರ್ಗನರಕಕ್ಕೆ ಹೋಗಿ ಅಲ್ಲಿಯು ಭೋಗಾದಿಗಳನ್ನು ತೀರಿಸಿ ಪುನಃ ದೇಹವನ್ನು ತರುವದರಿಂದ ಇದಕ್ಕೆ ಲಯವಿಲ್ಲಾ. ಮನಸ್ಸು ಶುದ್ಧಿಯಾದುದೇ ಪ್ರಕಾರ ವಚನದಲ್ಲಿ ಅಪ್ಪುಕ ಕೊಂದಿರುವದು. ಸಕಾರವೆಂದರೆ ಕಾಯದಲ್ಲಿ ವಂಚನೆಯಿಲ್ಲದಿದುದೆ ತ್ರಿಕರಣ ಪ್ರಸಾದವೆಂದುದ್ದು ಪಂಚಕ ಇಂದಾದ ಪಂಚಪ್ರಣಮಮೂರ್ತಿ ಶಿವನೇಂದು ಮಂತ್ರ ಸಂಸ್ಕಾರಿಯಾದ ಜೀವನು ಮಾಂಸ ಪಿಂಡ ಸೂತಕವಳದು ಅಕಾರ ಉಕಾರ ಮಕಾರ ತ್ರಿಯಕ್ಷರದ ಜಗವೇ ಕೂಟ ಕೂಟವೇ ಜಗ ಇದೇ ಜಂಗಮ ಪ್ರಸಾದ ಮೂರ್ತಿಯಾದ ಪರಶಿವನ ಪ್ರಥಮ ರೇಖೆಯಾದ ಬೀಜವಪ್ಪ ಪ್ರಸಾದ ಬೀಜವು ಅಕ್ಷರ ಸ್ವರೂಪವಾಗಿರುವದು ಅಕಾರ ಛಕಾರಂಗಳಾಯಿತೆಂದುದು ಅಂತರ‍್ಯಾಮಿ ಈಗನಾದ ಬ್ರಹ್ಮ ಓಂಕಾರಶಿರದ ಮೇಲಣ ನಿರಂಜನ ರೇಖೆಯು ಷಡಾನನವೆಂಬು ತಿಳಿವದು ಓಂಕಾರಪ್ರಣಮದ ಊರ್ಧ್ವ ರೇಖೆಯಲ್ಲಿಯು ಊರ್ಧ್ವ ಪ್ರಥಮದಲ್ಲಿಯು ತನ್ನ ಶಕ್ತಿಯ ಬೀಜಗಳಾಗಿ ಮೂರು ಪ್ರಕಾರವಾಗಿ ವರ್ತಿಸುತ್ತಿಹುದು, ಓಂಕಾರದ

ಊರ್ಧ್ವಶಿರೋರೇಖೆಯು ಚಿಚ್ಛಕ್ತಿ. ಪೂರ್ಧ್ವಪ್ರದೆ ಓಂಕಾರದ ನಿರಂಜನ. ನಿರಂಜನ ಕಲಿಯರೇಖೆ. ಶಾಂತ್ಯತೀತ ಕಲೆ ಪರ ಶಕ್ತಿ. ಓಂಕಾರದ ಯಡದ ಭಾಗವೇ ಆದಿ ಶಕ್ತಿ. ಓಂಕಾರದ ಬಲಭಾಗವೇ ಇಚ್ಛಾ ಶಕ್ತಿ ಎಂದರೆ ಈಶ್ವರನ ಶರೀರ ಇಚ್ಛಾ ಶಕ್ತಿ ಎಂಬ ನಾಲ್ಕು ಅಕ್ಷರವೇ ಈಶ್ವರ ನೆಂಬ ನಾಲ್ಕು ವರ್ಣಂಗಳಾದವು: ಈ ಎಂದರೆ ರೇತಸ್ಸು ಛಯೆಂದರೆ ರುಧಿರ ಮಾಂಸ ಚರ್ಮ ಮತ್ತು ಈ ಎಂದರೆ ಕ್ರಿಯಾ ಶಕ್ತಿ. ಛ ಎಂದರೆ ಜ್ಞಾನ ಶಕ್ತಿ. ಈ ಎಂದರೆ ಇಚ್ಛಾ ಶಕ್ತಿಯೇ ಈ ಜಗತ್ತಿಕ್ಕೆ ಬೀಜವು. ಪರಶಿವನೇ ಗೂಢಸಂಜ್ಞ ಕಾರಣರುಕ್ಷ ಸಂಜ್ಞ ಪದವೆಂಬ ಸಂಜ್ಞ. ನೇತ್ರ ವೆಂಬ ಸಂಜ್ಞ ಲಿಂಗ ಸಂಜ್ಞ ಪಂಚ ಸಂಜ್ಞಗಳು. ಅಕಾರ, ಉಕಾರ. ಮಕಾರಗಳು ಕೂಡಿಕೊಂಡು ತ್ರಿತಿಯು ಕುಂಡಲಾಕಾರಂ. ಆ ಓಂಕಾರದ ನಿತಂಬ ನಾಭಿಯು. ಸರ್ಪದಾಕಾರವು ಭುಜಂಗೆ ಹಕಾರ ಕೂಡಿಗೊಂಡಿಹುದು ಆ ಸಕಾರವೀಗ, ಅಕಾರದಲ್ಲಿ ಅರ್ಧ ಮಾತ್ರೆ ಚತುರ್ಥ ಚಂದ್ರಮ ಓಂಕಾರ ವಾಯ್ತು. ಅರ್ಧಚಂದ್ರನಾಕಾರಳಕಾರ ಕೂಡಿರುವದು. ಓಂಕಾರ ಮಧ್ಯದಲ್ಲಿ ಪ್ರಾಣಜೀವಬಿಂದು ಸ್ವರೂಪ ಓಂಕಾರದ ನಿರಂಜನ ರೇಖೆ ಶಿಖರದಲ್ಲಿಹುದು.

ಓಂಕಾರದ ಯಡಭಾಗವೇ ಅಕಾರ. ಓಂಕಾರದ ಬಲಭಾಗವೇ ಉಕಾರ. ಓಂಕಾರದ ಬಿಂದು ಶಿರಸ ಪ್ರಕಾರವು ಮಕಾರ. ಓಂಕಾರದ ಶರೀರ ಸರ್ವ ಅವಯವಂಗಳಾದವು. ಹಕಾರ ಓಂಕಾರ ಅಪಾದ ಮಸ್ತಕವಾದವು. ಳಕಾರವೆಂದರೆ ಬ್ರಹ್ಮಾಂಡದ ಬೀಜವು ದಕ್ಷಿಣವೆಂದರೆ ಬಲಭಾಗ ಭಾಗವೆ ಪೃಥ್ವಿ ಬೀಜ ಪೃಥ್ವಿ ಎಂದರೆ ಲಕ್ಷ್ಮಿ ಬ್ರಹ್ಮಾಣಿವಾಣಿ ಹುಟ್ಟುವ ಬೀಜ ಲಕ್ಷ್ಮಿ. ಳಕಾರವೇ ಸರ್ವಪ್ರಕಾರವಾಯ್ತು. ಕಾಲಾಮೃತಾರ್ತಿತ ಪಂಚಕ್ಕೆ ರಡಕ್ಷರಂಗಳು ಹೀಗೆ ಉದ್ಭವಿಸಿದವು.

ತತ್ಕ್ಷ ಕುಂಡಲಿ ರೇಖೆಯಲ್ಲಿ ಮಹೇಶ್ವರ ನಿರ್ಮಿಸಿತ್ತು. ಓಂಕಾರದ ಭಗವಾನ್ ಶಿವನು ಪುರಾಣಂಗಳು ಸ್ವಯಂ ಅರ್ಧಚಂದ್ರನಾಕಾರ ರೇಖೆ ಯಲ್ಲಿ ಈಶ್ವರನ ಉತ್ಪತ್ತಿ ಮಾಡಿತು.

ಓಂಕಾರ ಭಗವಾನಾ ರುದ್ರನಿಂದು ಸಕಲ ಆಗಮ ಶಾಸ್ತ್ರಂಗಳಿ

ರುವವು.

ಪ್ರಸಾದ ಮೂರ್ತಿಯೇ ಕೇಳು. ಶಿವನಾನಿ ವಲ್ಲಭ ಐವತ್ತೆರಡಕ್ಷರದ ಸೃಷ್ಟಿಯನು ಓಂಕಾರದಿಂದ ೫೨ ಅಕ್ಷರಗಳು ಹುಟ್ಟಿದವು ಮನುಷ್ಯರುಗಳಿಗೆ ಸಪ್ತ ಧಾತುವೇ ಬೀಜಬಾವಾನ್ನೆ ಅಕ್ಷರಕ್ಕೆ ಪಂಚ ಧಾತುಗಳೇ ಬೀಜ. ಅಕ್ಷರದ ಮಾತೆಯು ಮೂರು ಕಲೆಗಳು. ಅಕ್ಷರದ ತಂಪೆಯು ಎರಡು ಕಲೆಗಳು. ಅಕ್ಷರದ ಮಾತೆ ತಂದೆಎಂದರೇನು ಅಕ್ಷರದ ತಾಯಿಯುರು. ಅಕ್ಷರದ ತಂದೆಯುರು ಅಕ್ಷರದ ತಾಯಿ ಓಂಕಾ. ಅಕ್ಷರದ ತಂದೆ ೯ಕಾರವು ೯ಕಾರ ಓಂಕಾರ ಈ ಎರಡಕ್ಷರದಿಂದ ೫೨ ಅಕ್ಷರ ಳಾದವು ಓಂಕಾರ ಐದು ಮುಖವಾಗಿರುವದು. ಹ್ಯಾಗೆಂದರೆ ತಾರಕ ಬ್ರಹ್ಮ, ದಂಡಕಾ ಬ್ರಹ್ಮ ಕುಂಡಲಾ ಬ್ರಹ್ಮ ಅರ್ಧಚಂದ್ರ ಬ್ರಹ್ಮ ಬಿಂದು ಬ್ರಹ್ಮ ಇದರಿಂದ ೫ ಬ್ರಹ್ಮರುಗಳು ಹುಟ್ಟಿದರು. ವಾಮುಕಲೆ. ದಕ್ಷಿಣ ಕಲೆ. ಅರ್ಧಕಲೆ ಊರ್ಧ್ವ ಕಲೆ ವಾಮುಕಲೆ ಅಕಾರ ದಕ್ಷಿಣ ಕಲೆ. ಉಕಾರ ಬಿಂದುಕಲೆ. ಮಕಾರ ಅರ್ಧ ಕಲೆಯು ಹಕಾರ ವೂರ್ಧ್ವಕಲೆ ೯ಕಾರ, ಈ ಐದು ಕಲೆಗಳು ಕೂಡಿ ಓಂಕಾರವಾಯ್ತು.

ಕರ್ಮ. ಕೃತ ಮೂರ್ತಿ ಅಮೋರ್ತಿ ಶಿವಸಾದಾಖ್ಯ. ಅಲಂಕಾರ, ಆಧ್ಯ ಶಾಂತತೀತ ಶಾಂತತಿ ಸ್ಮೃತಿ ಕರ್ತು ನಿರ್ವಿಕ್ತಿ, ಅಭಿದಾನ ಸಮಾನ ವಿಭುಕ್ತಿ ಛಂದಸ್ಸು, ನೇಮ, ನಾಮ ಮೂಲಧೃತ ಲಘು, ಗುರು ಪ್ಲುತ ವಿರಾಮ ಸಂಖ್ಯೆ ಸಂಕೀರ್ಣ. ನಿಪಣಶ್ರಿತ. ಬಾವ ರಸ ಗಣ, ವಾಕಕಾಳ: ವೆಂಜನ ವಿಸರ್ಗ, ಬಿಂದುಪಾದ, ಮಾರ್ಗ, ಪೂರ್ವಭಾಗು ಪಂದಾದಿನ, ಶೇಷ, ವಿದಿ ಸಮ, ಹೃತ್ಯ ಬಂಧ ತಂತ್ರವರ್ಗ, ಪೂರ್ವದ ಮಧ್ಯರ್ಥ, ದೀರ್ಘ, ವೆಂಜನ ಈ ಐವತ್ತೆರಡು ಕಲೆಗಳಿಂದ ಓಂದೊಂದು ಅಕ್ಷರಗಳಿಂದ ಹುಟ್ಟಿದವು. ಇವು ಪಸಾದ ಬೀಜ ಮಂತ್ರದಿಂದಲೇ ಹುಟ್ಟಿದವು ಸಕಾರದ ರೇಖೆಯು ಅಕ್ಷರಂಗಳು, ಅಂಗದ ಎಡದ ರೇಖೆ. ಅಕ್ಷರದ ಬಲದ ರೇಖೆ ಕುಕ್ಷೆ ಕಕ್ಷೆಗಳು ಕುಂಡಲದರೇಖೆ ನಿತಂಬಜಿ ನಾಭಿಗಳಾದವು. ಅಕ್ಷರಂಗಳೇ ಮೂರು ಧಾತುಗಳಾದವು. ಓಂಕಾರದ ಶಕ್ತಿಗಳಿಂದ ಹುಟ್ಟಿದವು.

| | | | | |
|---|---|---|---|---|
| ಸವಾರನು | ಕುದರೆ | ಅಗಸಿ ಬಾಗಿಲು | ಜವಾನನ್ನು | ವಿಷಯ |
| ಜೀವನು | ಸಮಾನ | ಶ್ರೋತ್ರ | ವಾಕ್ಕ | ಶಬ್ದ |
| ಮನ | ವ್ಯಾನ | ತ್ವಕ್ಕು | ಪಾಣಿ | ಸ್ಪರ್ಶ |
| ಬುದ್ಧಿ | ಉದಾನ | ನೇತ್ರ | ಪಾದ | ರೂಪ |
| ಚಿತ್ತ | ಅಪಾನ | ಜಿಂಹೆ | ಗುಹ್ಯ | ರಸ |
| ಅಹಂಕಾರ | ಪ್ರಾಣ | ಘ್ರಾಣ | ಗುದ | ಗಂಧ |

ಅಕ್ಷರದ ಶಿರವರದನ ತಲೆಕಟ್ಟುಗಳು. ಕ. ಮತ್ತು ಳಕಾರ ಶಿವನಿಂದ ಜನಿಸಿದವು. ಜನಿಸಿದ ಅಕ್ಷರದ ಇಪ್ಪತ್ತಾರು ಗಂಡಕ್ಷರಗಳು ೨೬ ಹೆಣ್ಣಕ್ಷರಗಳು ಇವರಿಂದ ಶಿವಶಕ್ತಿಯಾತ್ಮನೇ ಇಂತಿ ಅಕ್ಷರಂಗಳು. ನಡ ಮತ್ತು ಪಾದಗಳು ಪ್ರಸಾದ ಜೀತನ ಅಂಗ ತ್ರಯುಗಳಾದವು. ಅಕಾರವೆ ಸ್ತ್ರೀ ಲಿಂಗ ಸಕಾರವೆ ಪುಲ್ಲಿಂಗ, ನಕಾರವೆ ನಪ್ಸುಂಸಕ ಲಿಂಗವಾಯ್ತು. ಈ ಮೂರು ಲಿಂಗಗಳೇ ಪಿಂಡ, ಅಂಡ ಬ್ರಹಾಂಡ ನಡಿಸುವ ಸೂತ್ರಧಾರಿತಾನೆ ಪ್ರಣವ ಪ್ರಸಾದವೆಂದುದು. ಈಶ್ವರನಿಗೆ ನಾಲ್ಕು ದೇಹಂಗಳುಂಟು. ವಿರಾಟ್ ಸ್ಥೂಲ ದೇಹ ವಿರಾಟ್‌ನೆಂದರೆ ಬ್ರಹ್ಮಾಂಡ ಬ್ರಹ್ಮಾಂಡವೆಂದರೆ ಅಷ್ಟಮೂರ್ತಿ ಸಂಯುಕ್ತವಾಗಿದ್ದರೆ ಬ್ರಹ್ಮಾಂಡ ಅಷ್ಟ ಮೂರ್ತಿಎಂದರೇನು. ಪೃಥ್ವಿ ಅಪ್ಪು, ತೇಜ ವಾಯು, ಆಕಾಶ, ಸೂರ್ಯ ಚಂದ್ರ ಆತ್ಮ ಇವು ಶಿವನ ಅಷ್ಟ ತನುಗಳು. ಜಗತ್ತು, ವಾಯು, ಚತುರ್ದಶ ಭುವನಂಗಳು, ಸಪ್ತ ಸಮುದ್ರಂಗಳು, ಸಪ್ತ ದ್ವೀಪಂಗಳು, ಸಪ್ತ ಕುಲ ಪರ್ವತಂಗಳು, ಸಮಸ್ತ ಗ್ರಹ ರಾಶಿಗಳು, ತಾರಾಪಥಂಗಗಳು ಕೂಡಿ ಬ್ರಹ್ಮಾಂಡವೆನಿಸಿರುವದು. ಹದಿನಾಲ್ಕು ಭುವನ, ಮೂರುಲೋಕ, ಸ್ವರ್ಗ, ಮರ್ತ್ಯ ಪಾತಾಳ, ಇವು ಕೂಡಲಾಗಿ ಬ್ರಹ್ಮಾಂಡವೆನಿಸಿತ್ತು. ಆ ಬ್ರಹ್ಮಾಂಡಕ್ಕೆ ಅಷ್ಟ ದಿಕ್ಕು ನವ ಖಾಂಡ ಪೃಥ್ವಿ.

೫೬ ದೇಶ, ಸಪ್ತ ಪಾತಾಳ, ಸಪ್ತ ಸ್ವರ್ಗ, ಹದಿನಾಲ್ಕು ಲೋಕ ವಾಯ್ತು. ಪ್ರಸಾಧೀಶ್ವರನ ಪಾತಾಳವೇ ಅಥಳ ಪಾದೋರ್ಧ್ವವಿತಳ ಲೋಕ, ಜಾಘ್ನುಸುತಳ ಲೋಕ, ಪಾದದ ಸಂದುಗಳೇ ಮಹಿತಳ ಲೋಕ.

ಝುಂಝೆಗಳೇ ಥಳ ಥಳ ಲೋಕವು. ಗುಹ್ಯವೆರಸಾತಳ ಪಾತಾಳ ಗುಂಪಕಟಿ ಸಂದುಗಳಾದವು.

ಭೂಲೋಕವೇ ನಾಭಿ ಮಧ್ಯವು ಭುವರ್ಲೋಕವೇ ಕುಕ್ಷಿ ಪಡಲು ಬೆನ್ನುಗಳಾದವು ಸ್ವರ್ಗಲೋಕವೆ ಹೃದಯದಿ ಉರಯುಗಗಳಾದವು. ಮಹಾರ್ಲೋಕವೇ ಕಂಠ ಗರಳ, ಕುತ್ತಿಗೆ, ಹೆಡಕಿನ ದೇಶಗಳಾದವು ಜನ ರ್ಲೋಕವೆ ಓಷ್ಠ. ಊಮಳೈಕ್ಯಜಂವ್ವೆಗಳಾದವು. ತಪರ್ಲೋಕವೆ ಲಲಾಟ ಲಿಖಿತ ತ್ರಿಕೂಟ ನೊಸಲುಗಳಾದವು. ಸತ್ಯರ್ಲೋಕವೆ ಬ್ರಹ್ಮರಂಧ್ರ ಶಿಖಿ ಪಶ್ಚಿಮಚಕ್ರಗಳಾದವು ಈಡಾಪಿಂಗಳ ಸುಷುಮ್ನವಂದಾದ ತ್ರಿಕೂಟ ನಾಶಿಕ. ಉರ್ಧ್ವವೆ ಮೇರು ಪರ್ವತ ಅನುಳೈಕ್ಯ ಓಂಕನಾಳದ ಅರ್ಧನಾಳವೆ ಮಂದಾರ ಪರ್ವತದೇಶ ನಾಡಿ ದಕ್ಷಿಣ ಭಾಗವೇ ಕೈಲಾಸ ಪರ್ವತ ವಾಮ ನಾಡಿಯು ಚಂದ್ರಸ್ವರ ಚಂದ್ರಕಾಂತದ ಅಮೃತ ಕೊಡನದಿ ಪರಮ ಪ್ರಸಾದ ಇದೇ ಹಿಮಚಲ ಪರ್ವತ. ಸ್ವಾಸಗಳೇ ಉನ್ಮನಿ ಊರ್ಧ್ವನಿವಾಸ ದಕ್ಷಿಣ ನಾಡಿಯಿಂದ ಸರ್ವಗಂಧ ವೆನಿಸಿಹುದು. ಗಂಧದಿಂದ ಕೂಡಿದ್ದೆ ಗಂಧ ಪರ್ವತ ರೋಮಾದಿ ರೋಮಂಗಳೇ ರೋಮಕುಲಪರ್ವತಂಗಳು. ಊರ್ಧ್ವ ಅವ ಯುವಗಳೇ ಸಪ್ತಕುಲ ಪರ್ವತಂಗಳೆಂದುದು.

ಅಸ್ಥಿಗಳೇಜಂಬುದ್ವೀಪಗಳು. ಮಜ್ಜೆಯೇ ಶಾಕೋದ್ವಿಪ. ಮಾಂಸವೇ ಕುಶ ದ್ವಿಪ. ಕ್ರೌಂಚದ್ವೀಪವೆ ರಸವಾಯುತ್ತು ಶ್ಯಾಲ್ಮಲಿ ದ್ವಿಪವೇ ಚರ್ಮ ವಾಯುತ್ತು. ದಕ್ಷದ್ವಿಪವೇ ಮೇದಸ್ಸುವಾಯುತ್ತು

ರೋಮವೇ ಕ್ಷೀರ ದ್ವಿಪವಾಯುತ್ತು. ಸಪ್ತ ಧಾತುಗಳೇ, ಸಪ್ತದ್ವಿಪಂಗ ಳಾದವು: ಪ್ರಸಾಧೀಶ್ವರನ ಮೂತ್ರವೇ ಲವಣ ಸಮುದ್ರವಾಯುತ್ತು. ಆ ಶರ ಣನೊಳಗಣ ಅಮೃತವೇ ಕ್ಷೀರ ಸಮುದ್ರವಾಯುತ್ತು ಶ್ಲೇಷ್ಮವೇ ದಧಿ ಸಮು ದ್ರವಾಯುತ್ತು. ಮಜ್ಜೆಯು ಘೃತ ಸಮುದ್ರವಾಯುತ್ತು. ಆ ಶರಣನ ಶಾಂತಿ ಯೇ ಜೇನುತುಪ್ಪದ ಸಮುದ್ರವಾಯುತ್ತು. ಶ್ರೋಣಿತವೇ ರಸ ಸಮುದ್ರ

ವಾಯಿತ್ತು. ಲಂಬಿಕಾಸ್ಥಾನದ ಅಮೃತವೇ ಸ್ವಾದೋದಕ ಸಮುದ್ರವಾಯಿತ್ತು ಆ ಪ್ರಸಾಧೀಶ್ವರನ ಗರ್ಭಾವಳಿಯ ಬಿಂದು ಶುಕ್ಲ ಸಮುದ್ರವಾಯಿತ್ತು. ಪಂಚ ಪಾದ ರಸಗಳಾದವೆಂದು ಸಪ್ತ ದ್ವೀಪಂಗಳು ಸಪ್ತ ಕುಲ ಪರ್ವತಗಳು-ಸಮುದ್ರಂಗಳು, ಆ ಪ್ರಸಾಧೀಶ್ವರನ ಸರ್ವಾಂಗದೊಳಗಿರ್ದವೆಂದು ತಿಳಿಯುವದು. ಪ್ರಸಾಧೀಶ್ವರನ ನಾದ ಚಕ್ರವೇ ಸೂರ್ಯನಾದನು ಬಿಂದು ಚಕ್ರವೇ ಚಂದ್ರನಾದನು. ಲೋಚನವೇ ಮಂಗಳನಾದನು ಹೃದಯವೇ ಬುಧನಾದನು ಗುಹ್ಯವೇ ಪ್ರಜಾಪತಿ ಬೃಹಸ್ಪತಿಯಾಗಿಹನು. ಆಧಾರ ಚಕ್ರದ ಗುದಸ್ಥಾನದಲ್ಲಿ ಶುಕ್ರನಿಹನು ನಾಭಿ ಚಕ್ರದಲ್ಲಿ ಶನೀಶ್ವರನಿಹನು ಮುಖದಲ್ಲಿ ರಾಹು ಇರುತಿಹನು ಪಾದತಳದಲ್ಲಿ ಕೇತು ನೆಲಸಿಹನು ನಾಶಿಕಾಗ್ರದಲ್ಲಿ ಅಶ್ವಿನಿದೇವತೆ ಮೊದಲಾದ ನಕ್ಷತ್ರಂಗಳು ನೆಲಸಿಹವೆಂದು ತಿಳಿಯಬೇಕು. ಈಶ್ವರನ ಹೃದಯದಲ್ಲಿ ಬ್ರಹ್ಮನಿರುತಿಹನು ಕಂಠದಲ್ಲಿ ವಿಷ್ಣು ಇರುತಿಹನು. ಭ್ರೂಮಧ್ಯದಲ್ಲಿ ರುದ್ರನಿರುತಿಹನು. ನೊಸಲಲ್ಲಿ ಸದಾಶಿವನಿಹನು ಹೃದಯ ಕಂಠ ಭ್ರೂಮಧ್ಯ ಊರ್ಧ್ವಲಲಾಟಂಗಳಲ್ಲಿ ಪಂಚಭೂತ ನಾಯಕರು ನೆಲಸಿಹರೆಂದು ಹೇಳುವರು.

ಈಶ್ವರನ ಕರಕಮಲದಲ್ಲಿ ಮೂರ್ತಿ ನೆಲಸಿಹನು. ಅಂಗುಷ್ಠದಲ್ಲಿ ವಿನಾಯಕನಿರುತಿಹನು. ತರ್ಜನಿಯಲ್ಲಿ ಷಣ್ಮುಖನಿರುತಿಹನು. ಮಧ್ಯಮಾಂಗುಲದಲ್ಲಿ ಭೃಂಗೀಶ್ವರನಿಹನು. ಅನಾಮಿಕದಲ್ಲಿ ಮಹಾಕಾಯನಿರುತಿಹನು. ಕನಿಷ್ಠದಲ್ಲಿ ನಂದೀಶ್ವರನಿಹನು. ಕರಮಧ್ಯದಲ್ಲಿ ಸ್ಮರಮಾರಕಾರ ರಾಮೇಶ್ವರ ಲಿಂಗವಿಹನು. ಪರಿಪೂರ್ಣಲಿಂಗವು ಪ್ರಸಾಧೀಶ್ವರನ ಕರಾಬ್ಜವಾಗಿಹವೆಂದುದು. ಪ್ರಸಾದವಾಕ್ಯ ಆಶರಣನ ಪಾದಾಂಗುಷ್ಟದಲ್ಲಿ ಈಶ್ವರನಿರುತಿಹನು. ತರ್ಜನಿಯಲ್ಲಿ ಬ್ರಹ್ಮನಿರುತಿಹನು ಮಧ್ಯಮಾಂಗುಲದಲ್ಲಿ ವಿಷ್ಣು ಇರುತಿಹನು. ಅನಾಮಿಕದಲ್ಲಿ ಸ್ಕಂದನಿರುತಿಹನು. ಕಿರುಕುಣಿಕೆ ಬೆರಳಿನಲ್ಲಿ ಮಹದೇವನಿರುತಿಹನು. ಉಗುರುಗಳಲ್ಲಿ ಸಪ್ತವಿಂಶತಿ ನಕ್ಷತ್ರಂಗಳಿಪ್ಪವು. ರೋಮಗಳಲ್ಲಿ ಅಷ್ಟಾಸೃಷ್ಟಿ ತೀರ್ಥಂಗಳು ಮುಂತಾದ ಸಕಲ ತೀರ್ಥಂಗಳಿರುತಿಹವು. ಆಕಾಶದ ಅರ್ಧಭಾಗ ಜಾತ್ರವಾಯಿತ್ತು. ಇದು ಪ್ರಸಾದಲಿಂಗವಾಯಿತ್ತು

ವಾಯುವಿನಲ್ಲಿ ಆಕಾಶ ಕೂಡಲು ಮನವಾಯ್ತು. ಇದು ಜಂಗಮಲಿಂಗ ವಾಯ್ತು. ಅಗ್ನಿಯಲ್ಲಿ ಆಕಾಶ ಕೂಡಲು ಬುದ್ಧಿಯಾಯ್ತು ಶಿವಲಿಂಗ ವಾಯ್ತು. ಅಪ್ಪುವಿನಲ್ಲಿ ಆಕಾಶಕೂಡಲು ಚಿತ್ತವಾಯ್ತು. ಇದು ಗುರು ಲಿಂಗವಾಯ್ತು. ಪೃಥ್ವಿಯಲ್ಲಿ ಆಕಾಶಕೂಡಲು ಅಹಂಕಾರವಾಯ್ತು. ಇದು ಆಚಾರಲಿಂಗವಾಯ್ತು ಇದರಂತೆ ಇಪ್ಪತ್ತೈದು ತತ್ವಗಳು ಹುಟ್ಟಿ ದವು' ಮಂತ್ರಮಯ ಮೂರ್ತಿಯೇ ಜಂಗಮ. ತಾನೇ ಜಂಗಮ ತಾನೇ ಬ್ರಹ್ಮ ವಿಷ್ಣು ಮಹೇಶ್ವರನೆಂತಲು ಜಕಾರವೇ ಬ್ರಹ್ಮ ಗಕಾರವೇ ವಿಷ್ಣು ಮಕಾರವೇ ರುದ್ರ. ಜಕಾರವೇಗತಿ ನಿರ್ಮಿಸಬೇಕಾಗಿ ಬ್ರಹ್ಮನಾದ ಗಕಾರವೇ ಗಂಗಾಧರನಾಗಿ ಜಗಸ್ಥಿತಿ ನಡಿಸಬೇಕಾಗಿ ವಿಷ್ಣುನಾದ ಸಂಚಿತ ಪ್ರಾರಬ್ಧ ಕ್ರಿಯಾ ಕರ್ಮಬದ್ಧನಾಗಿ ಸೃಷ್ಟಿಯಂ ಸಂಹಾರಮಾಡಬೇಕಾಗಿ ಮಕಾರ ತಾಮಸ ಅಹಂಕಾರದಿಂದ ರುದ್ರನಾದನು. ಬ್ರಹ್ಮಾಂಡಕ್ಕೆ ಕಾರಣವಾಗಿ ಶಬಳ ಬ್ರಹ್ಮವೆನಿಸಿತ್ತು. ಆಕಾಶ ಬಳ ಬ್ರಹ್ಮವೇ ಪ್ರಸಾದ ಮೂರ್ತಿಯಾ ಯಿತ್ತು. ಪ್ರಸಾದವೆಂದೆಡೆ ಮಹಾ ಮಂತ್ರ ಮಹಾಮಂತ್ರವೆಂದೆಡೆ ಮಹಾ ಮ್ಮಾಯಿ ಮಹಮ್ಮಾಯಿಯೆಂದಡೆ ಮೂಲ ಪ್ರಕೃತಿ ಮೂಲ ಪ್ರಕೃತಿ ನೆಂ ದಡೆನಾದ. ನಾದಚೈತನ್ಯವು, ಚೈತನ್ಯವೇ ಪುರುಷ ಬಿಂದು ಪ್ರಕೃತಿ ಶಕ್ತಿ ಳಕಾರವೆಶಿವೆ ಓಂಕಾರವೇ ಶಿವಶಕ್ತಿ ಶಿವಶಕ್ತಿಯಾತ್ಮಕವೆ ಪ್ರಸಾದ. ಪ್ರ ಸಾದ ಮೂರ್ತಿಯಾದ ಮಹಾ ಕಾಯ. ಕಾಯತ್ರಯವೆಂತೆನಲು ಮಂತ್ರ ಮಯ ಶರೀರ. ಮಂತ್ರಮಯ ಜಗತ್ತು. ಲಿಂಗಮಯ ಶರೀರ ಲಿಂಗ ಮಯ ಜಗತ್ತು ಶರಣಶರೀರವೇಕಾಗಿರುವದು.

ಇಂದ್ರಿ ಲಿಖಿತವತೊಡೆದು ಲಿಂಗಲಿಖಿತವ ಮಾಡಿದ ಮಾಂಸ ಪಿಂಡವಳಿದು ಮಂತ್ರಪಿಂಡವ ಭೂತಕಾಯವ ಪರಿಹರಿಸಿ ಪ್ರಸಾದ ಕಾಯವ ಮಾಡಿ ಜೀವಾತ್ಮನಳಿದು ಪರಮಾತ್ಮನ ಮಾಡಿದ ಗುರುರಾಯನು. ಪ್ರಸಾದ ರೂಪು ಜಗತ್ತು. ಪ್ರಸಾದ ರೂಪು ಶರೀರವು ಆ ಯೋನಿ ಕೂಟದ ಬಿಂದು ವೇ ಬ್ರಹ್ಮ ಬಿಂದುವೇ ಸೃಷ್ಟಿಯ ಬೀಜವ ನೆಳಕೊಂಬುವದೇ ಯೋನಿಸ್ಥಳ ತಾನೇ ವಿಷ್ಣು ಉಭಯಬಿಂದು ಚೈತನ್ಯ ಪ್ರಾಣನಾಯಕನಾಗಿ ಉತ್ಪತ್ತಿ

ಸ್ಥಿತಿ. ಲಯವ ಮಾಡುವ ಊರ್ಧ್ವಲಿಂಗ ಮಹಾಲಿಂಗ. ಪುಲ್ಲಿಂಗ ಸ್ತ್ರೀ ಲಿಂಗ, ನಪುಂಸಕಲಿಂಗ. ವಿಶ್ವಲಿಂಗ ತಾನೇಯಾದ. ಗುರುಲಿಂಗವಾಗಿ, ವಿಶ್ವ ಸ್ಥಿತಿಗೆ ತನಡಿಯುಬೇಕಾಗಿ ವೇದ ಶಾಸ್ತ್ರ ಪುರಾಣವ ನಿರ್ಮಿಸಿದನಾದ ಸ್ಮೂರ್ತಿ ಸದಾಶಿವನ ಜಿಂಹೆವೇ ಗುರುಲಿಂಗವಾಗಿ ಬ್ರಹ್ಮ ಉಪದೇಶ ಮಾಡಿದನಾದ ಪೃಥ್ವಿ ಸೃಷ್ಟಿಯುಮಾಡಿದ್ದ, ಗುರುಲಿಂಗ, ವಿಷ್ಣು ಪೂಜಾರಿಯಾದ. ವಾಮ ದೇವ ಕರ್ತನಾದ ಮಹಾ ಮಹೇಶ್ವರನೇ ಆಧಿ ದೈವ. ಪಿಂಡ ಬ್ರಹ್ಮಾಂಡಕ್ಕೆ ಆಧಾರವಾದದ್ದೇ. ಆಧಾರ ಚಕ್ರ. ಸಕಲಾಧಾರಂಗಳಿಗೆ. ಬಸವನೇ ಆಧಾರ ಬಸವೇಭಕ್ತ. ನಂಗವೇ ಭೂಮಿ. ಈ ಭೂಮಿ ಯುಂತಾಯಿತೆಂದಡೆ. ಸುಜ್ಞಾನವೆಂಬ ಮೇವ ಪ್ಯೆಯ್ದು ನಕಾರವೆಂಬ ಮೊಲ ಕುಕ್ಕಿ ಓಂಕಾರವೆಂಬ ಸೃಷ್ಟಿ ದ್ರಿಷ್ಟಿಸಿ ಸರ್ವಾಧಾರ ಪಾತ್ರೆಯೊಳಗೆ ಹಿಡಿದು ಮಹಾ ಜ್ಞಾನನೆಂಬ ನೊಸಲಗಣ್ಣಿ ಶಿಖಿಯಿಂ ಸೋಡಲು ಭಸ್ಮವಾಯ್ತು. ಆಭಸ್ಮದಿಂದ ಭೂಮಿ ಸ್ಥಾಪ್ಯವಾಯ್ತು, ಇದೇ ಆಧಾರ. ಆಧಾರವೇ ಗುಧಸ್ಥಾನ ಅದೇ ಆಚಾರ ಲಿಂಗ ನೆಲಸಿಹುದು ಭಸಿತವ ಮಾಡಿ ಧರಿಸಿದವರಾರೆಂದಡೆ, ಪರಶಿವನು. ಸದಾಶಿವನು ಈಶ್ವರನು. ರುದ್ರನು. ನಾರಾಯಣನು. ಬ್ರಹ್ಮಸುರೇಂದ್ರ. ಮುನಿ ಜನಂಗಳು ಮುಕ್ತರಾದರು. ಮತ್ತು ವೀರಾಣ್ಮೂರ್ತಿಯ ಮಸ್ತಕದಲ್ಲೇ ಲಕಾ ದ್ವೀಪ. ನಾಭಿಯಲ್ಲಿ ಕ್ರೌಂಚ ದ್ವೀಪ. ಮುಖದಲ್ಲಿ ಪಕ್ಷ ದ್ವೀಪ ಕಂಠದಲ್ಲಿ. ಶ್ಯಾಮ್ಲದ್ವೀಪ, ಹೃದಯದಲ್ಲಿ ಕುಶ ದ್ವೀಪ ಗುಹ್ಯದಲ್ಲಿ ಶಾಕ ದ್ವೀಪ, ಗುದದಲ್ಲಿ ಪುಷ್ಕರದ್ವೀಪ, ಏಳುದ್ವೀಪಂಗಳು, ವೀರಾಣ್ಮೂರ್ತಿಯ ಮುಖದಲ್ಲಿ ಶುದ್ಧೋದಕ ಸಮುದ್ರ ನಾಶಿಕದಲ್ಲಿ ಘೃತ ಸಮುದ್ರ, ನೇತ್ರದಲ್ಲಿ ದುಗ್ಧ ಸಮುದ್ರ ಶ್ರೋತ್ರದಲ್ಲಿ ದಧಿ ಸಮುದ್ರ, ಗುಹ್ಯದಲ್ಲಿ ಸುರಸ ಸಮುದ್ರ, ಗುದದಲ್ಲಿ ಇಕ್ಷುರಸ ಸಮುದ್ರ ಸರ್ವಾಂಗದಲ್ಲಿ ಶ್ವೇದೋದಕ ಕ್ಷಾರ ಸಮುದ್ರ. ೭ ಸಪ್ತ ಸಮುದ್ರಗಳು, ವೀರಾಣ್ಮೂರ್ತಿಯ ಮಸ್ತಕವೇ ಶೃಂಗ ಪರ್ವತ ಬಲಭುಜವೇ ಅರುಣಾಚಲ ಪರ್ವತ ಯುಡ ಭುಜವೇ ಹೇಮಕೂಟ ಪರ್ವತ ಬಲಭಾಗದ ಎದಿಯೇ ಜಟಾದ್ರಿ ಪರ್ವತ ಯುಡಭಾಗದ ಯುದಿಯೇ ಪೂರ್ವಾದ್ರಿ ಪರ್ವತ ಯುಡದ ಪಶ್ಚಾಭಾಗವೇ ಶೀತಾತಪರ್ವತ ಬಲದ ಪಶ್ಚಿಗವೇ ಅನಘಪರ್ವತ ಇವು ೭ ಪರ್ವತಂಗಳು.

ಐವತ್ತಾರು ದೇಶಗಂಳು ೩೬ ಷಟ್ಕೋಣಂಗಳು. ೬ ಚಾವಡಿಗಳು ಮೂರು ಕೋಣೆ ಬಾಗಿಲಗಳ ವಿವರ. ಏಳು ಸ್ಥಾನಂಗಳೇ ಸಪ್ತ ದ್ವೀಪಂಗಳಾಗಿಹವು ಆದರೊಳಗೊಂದೊಂದುಸ್ಥಾನದ ಸಂಧಿಗೆ ಐವತ್ತಾರುಶಿಲಗಳೇ ಐವತ್ತಾರುದೇಶಂಗಳು. ಮೂರ್ತಿಯು ಷಟ್‌ಸ್ಥಲಂಗಳೇ ಒಂದೊಂದ.ಸ್ಥಲಕ್ಕೆ ಆರಾರು ತತ್ವಂಗಳೇ ಮೂವತ್ತಾರು ಷಟ್ಕೋಣಂಗಳು. ೬ ಚಕ್ರಗಳೇ ಆರುಚಾವಡಿಗಳು ಅಧೋಹೃದಯ, ಮಧ್ಯಹೃದಯ, ಊರ್ಧ್ವ ಹೃದಯವೇ ಈ ಮೂರು ಕೋಣೆಗಳು. ಬ್ರಹ್ಮಸ್ಥಾನವೇ ಮೂರು ಕೋಣೆಗಳಿಗೆ ಮಂದೇ ಬಾಗಿಲದ ಕೀಲು ಈ ವಿಷಯವನ್ನು ಗುರುವಿನಿಂದ ತಿಳಿದಾತನೇ ಮುಕ್ತನು

೫ ಕರ್ಮೇಂದ್ರಿಗಳು. ೫ ಜ್ಞಾನೇಂದ್ರಿಯಂಗಳು. ೫ ಪ್ರಾಣವಾಯುಗಳು. ಮನ ಬುದ್ಧಿ ಕೂಡಿ ಸೂಕ್ಷ್ಮ ಶರೀರವಾಗಿರುವದು. ಇವೇ ೧೭ ತತ್ವಂಗಳು.

| | | | | | |
|---|---|---|---|---|---|
| ಆಕಾಶ ತತ್ವಗಳು | ಜ್ಞಾತೃ | ಮನ | ಬುದ್ಧಿ | ಚಿತ್ತ | ಅಹಂಕಾರ |
| ವಾಯು ತತ್ವಗಳು | ವ್ಯಾನ | ಸಮಾನ | ಉದಾನ | ಅಪಾನ | ಪ್ರಾಣ |
| ಅಗ್ನಿ ತತ್ವಗಳು | ನೇತ್ರ | ಶ್ರೋತ್ರ | ತ್ವಕ್ಕು | ಜಿಂಪ್ಹೆ | ಘ್ರಾಣ |
| ಅಪು ತತ್ವಗಳು | ಶಬ್ಧ | ಸ್ಪರ್ಶ | ರೂಪು | ರಸ | ಗಂಧ |
| ಪೃಥ್ವಿ ತತ್ವಗಳು | ವಾಕ್ಕು | ಪಾಣಿ | ಪಾದ | ಗುಹ್ಯ | ಗುದ |
| ಇವು ೩೫ ತತ್ವಗಳು ನಾಗ | ಕೂರ್ಮ | ಕೃಕರ | ದೇವತ್ತ | ಧನಂಜಯ | |
| ವೈರಂಭ | ಮುಖ್ಯ | ಪ್ರಭಂಜನ | ಅಂತರ್ಯಾಮಿ | ಮಹಾಪ್ರಾಣ | |

ಇವುಗಳಿಂದ ಸ್ಥೂಲ ದೇಹವಾಯ್ತು.

ಇವು ೧೦ ವಾಯು ಇದರಲ್ಲಿ ಜ್ಞಾನೊಂದು ಕೂಡಿದರೆ ೩೬ ತತ್ವಗಳಾಗುವವು. ಆರು ಚಕ್ರಗಳಿಗೆ ಆರಾರು ತತ್ವಗಳು ಕೂಡಿದರೆ ೩೬ ತತ್ವಗಳಾಗುವವು.

ಶಿವನು ಒಂದನೇ ತತ್ವ ಜೀವನು, ಎರಡನೇತತ್ವಮೂರ ಅಹಂಕಾರಗಳೇ ೩ ತತ್ವಗಳು ನಾಲ್ಕು ಅಂತಃಕರಣಗಳೇ ನಾಲ್ಕು ತತ್ವಗಳು. ೫ ಭೂತಗಳೇ ೫ ತತ್ವಗಳು ೬ ಸ್ಥಲಗಳೇ ೬ ತತ್ವಗಳು, ೫ ತನ್ಮಾತ್ರಗಳು.

ಮಹ ತತ್ವ. ಮೂಹಂಕಾರ ಕೂಡಿದರೆ ೭ ತತ್ವ ಅ ಕ ಚ ಟ ತ ಪ ಯ ಶ ಅಷ್ಟ ಪ್ರಕೃತಿಗಳೇ ೮ ತತ್ವಗಳು. ೯ ದ್ವಾರಗಳೇ ೯ ಚಕ್ರಗಳೇ ೯ ತತ್ವಗಳು. ೧೦ ಈಂದ್ರಿಯಗಳೇ ೧೦ ತತ್ವಗಳು. ಇದರಲ್ಲಿ ಮನ ವಂಮ ಕೂಡಿದರೆ ೧೧ ತತ್ವಗಳು ಜ್ಞಾನ ಒಂದು ಕೂಡಿದರೆ ೧೨ ತತ್ವಗಳು. ೧೦ ಇಂದ್ರಿಗಳು ೩ ನಾಡಿಗಳು ಕೂಡಿದರೆ ೧೩ ತತ್ವಗಳು. ೧೦ ಇಂದ್ರಿಗಳು ನಾಲ್ಕು ಅಂತಃಕರಣಗಳು ಕೂಡಿದರೆ ೧೪ ತತ್ವಗಳು. ಜ್ಞಾನೊಂದು ಕೂಡಿದರೆ ೧೫ ತತ್ವಗಳು. ೧೦ ಇಂದ್ರಿಯಗಳು, ಪಂಚ ಪ್ರಾಣಗಳು ಕೂಡಿ ಮನ ವಂದು ೧೬ ವಿಕಾರಗಳು. ೧೦ ಇಂದ್ರಿಗಳು ಪಂಚ ಪ್ರಾಣಗಳು ಮನ ಬುದ್ಧಿ ಕೂಡಿದರೆ ೧೭ ತತ್ವ ಜ್ಞಾನೊಂದು ಕೂಡಿದರೆ ೧೮ ತತ್ವ ೬ ಸ್ಥಲಗಳು ೮ ವರ್ಣಗಳು ಪಂಚಾಚಾರಗಳು ಕೂಡಿದರೆ ೧೯ ತತ್ವಗಳು ಸದ್ರೂಪದಲ್ಲಿ ೩ ಪ್ರಕಾರ. ಚಿದ್ರೂಪದಲ್ಲಿ ನಾಲ್ಕು ಪ್ರಕಾರ ಆನಂದವಲ್ಲಿ ೮ ಪ್ರಕಾರ, ನಿತ್ಯದಲ್ಲಿ ನಾಲ್ಕು ಪ್ರಕಾರ, ಪರಿಪೂರ್ಣದಲ್ಲಿ ೩ ಪ್ರಕಾರ ಒಟ್ಟು ೨೨ ಪ್ರಕಾರ ೨೨ ತತ್ವಗಳಾಗುವವು. ೪೪ ಅಂಗ ಸ್ಥಲಗಳು. ೫೭ ಲಿಂಗ ಸ್ಥಳಗಳು. ಒಟ್ಟು ೧೦೧ ಸ್ಥಲಗಳು ಒಟ್ಟು ೨೧೬ ಲಿಂಗ ಸಕೀಲಗಳು ಇದಕ್ಕೆ ೬ ರಿಂದ ಗುಣಿಸಿದರೆ ೧೨೯೬ ತತ್ವಗಳಾಗುವವು.

ಸಂಚಿತ ಪ್ರಾರಬ್ಧ ಆಗಾಮಿ ಈ ಮೂರು ಕರ್ಮಂಗಳನ ಡದೆ ಇಂಸಲು ಆಚಾರವತಿಳಿದು, ಗುರುಕದಲ್ಲಿ ಪುಟ್ಟಿ ಲಿಂಗಾಂಗಿಯಾದುದೇ ಪ್ರಾರಬ್ಧ. ಶುದ್ಧ ಶಿದ್ಧ ಪ್ರಶಿದ್ಧ ತನಗಿಂಬುಗೊಂಡದ್ದೆ ಸಂಚಿತವು, ಇಂಥಾ ಶರಣರಿಗೆ ಮೂರು ಕರ್ಮಂಗಳಿಲ್ಲವು. ಅಂತಃಕರುಣದ ವಿವರ. ಅಂತಃಕರುಣವೇ ಪ್ರಥಮಪುರಾಣದ ಜಂಗಮಲಿಂಗ ಮನವೆಂದಿನಿಸಿತ್ತು. ಅಂತಃಕರಣ ಚಲಿಸಲಾಗಿ ಸಂಕಲ್ಪ ವಿಕಲ್ಪಕ್ಕೊಳಗಾಗದೆ ಮನವೆನಿಸಿತ್ತು. ಮನವು ಉರ್ಧ್ವಮುಖವಾಗಿ ಭ್ರೂಮಧ್ಯಕ್ಕೆ ದ್ರಿಷ್ಟಿಸಿನೋಡಲು. ಮನವೇ ಮಹಾಘನವೆಂದು ನಿಶ್ಚೈಸಲು. ಅದು ಬುದ್ಧಿಯಾಗಿರುವದು.

ಓಂಕಾರದ ಅರ್ಥ ಮಾತ್ರಯೆಂದರೆ ನಾದ ಶುದ್ಧ ಸತ್ವಗುಣ ಜ್ಞಾನಶಕ್ತಿ ಮೂರ್ಧಿನಿ ಸ್ಥಾನ ಬ್ರಹ್ಮಾಂಡ ಷಡ್ವಿಧೈಶ್ವರ್ಯ ಭೋಗ ವಿಲ್ಲದೆ ತತ್ವದ

ಲಕ್ಷ್ಯಾರ್ಥ ಲಕ್ಷ್ಯಾವೆಂದರೆ ಎಕ್ಕೊ ಸಾಕ್ಷಿ ಯಾಗಿರುವದು ತಾನೆ ವಿಲಕ್ಷಣ ತಾನೆ. ದೃಗ್ ದೃಶ್ಯ. ದೃಷ್ಟ, ಮಂತ್ರಗಳೇ ಉನ್ಮಿಷವೇ ಬೀಜ. ತತ್ವಾಂಗಕ್ಕೆ ಅರ್ಧ ಮಾತ್ರಿಯೇ ಬೀಜ ಪಿಂಡಾಂಡಕ್ಕೆ ಓಂಕಾರ ಬೀಜ ಪ್ರಸಾದ ಅಂಗವೆಂದಿತ್ತು ಮಂತ್ರಾಂಗದಲ್ಲಿ ಸ್ವಯಂಭು ಲಿಂಗವು ತತ್ವಾಂಗದಲ್ಲಿ ಅನ್ಯೃತಲಿಂಗವು ಪಿಂಡಾಂಗದಲ್ಲಿ ರುಚಿ ಲಿಂಗವು. ಷಡಾಂಗಲಿಂಗವು ಈ ಈ ನಾಲ್ಕುಲಿಂಗವೆಂದುದು. ಘಟಂಕಾಶ ಮಠಾಕಾಶ ಮಹದಾಕಾಶಂಗಳೆಲ್ಲ ವ್ಯಾಪಿಸಿ ಸರ್ವವ್ಯಾಪಕ ಸ್ಥೂಲದೇಹವಾಯ್ತು. ತನ್ನ ಘನತೆಯಿಂದ ಉನ್ಮಿಷ ಮಿಸಕಲು ಸೂಕ್ಷ್ಮವೆನಿಸಿತ್ತು, ಆ ಉನ್ಮಿಷವೇ ಘೋಷದ ಧ್ವನಿದೋರಿದನಾದವೇ. ಅರ್ಧ ಮಾತ್ರಿಯೇಕಾರಣವೆನಿಸಿತ್ತು. ಆ ನಾದವೇ ಪ್ರಣವ ಸ್ವರೂಪವಾಗಿ ಉಚ್ಚಾರಕ್ಕೆಬಂದುದು. ಮಹಾಕಾರಣವೆನಿಸಿತ್ತು.

ಪರಾತ್ಪರಂಪರ ವಸ್ತು ಪ್ರಸಾದ ಮೂರ್ತಿಯಾದ ಮಂತ್ರಾಂಗವಾದ ಸ್ಥೂಲ ದೇಹಕ್ಕೆ ಭರ್ಗೋದೇವನಧಿಪತಿ ಚೈತನ್ಯ ಕಾರಣ ಲಿಂಗಕ್ಕೆ ಅವ್ಯಕ್ತಮೂರ್ತಿ ವಡಿಯನು. ಪ್ರಸಾದವೇ ಮಹಾ ಕಾರಣ ವೇದಕ್ಕೆ ಪರಶಿವನೇ ಕರ್ತನು. ಪ್ರಸಾದಿಯು ಪ್ರಥಮ ಮುಖತಾರಕ ಬ್ರಹ್ಮ ತಾರಕ ಬ್ರಹ್ಮವೇ ಪ್ರಥಮ ರೇಖೆ. ಪ್ರಥಮರೇಖೆಯು ನಿರಂಜನ ತಾನೇ. ಸದ್ಯೋಜಾತ ಪ್ರಸಾದವೆಂದಿತ್ತು

ಭಕ್ತ, ಮಹೇಶ ಈ ಎರಡು ತ್ಯಾಗಾಂಗಳು. ಪ್ರಸಾದಿ- ಪ್ರಾಣಲಿಂಗಿ ಈ ಎರಡು ಭೋಗಾಂಗಳು ಶರಣ, ಐಕ್ಯ ಈ ಎರಡು ಯೋಗಾಂಗಗಳು. ವಿದ್ಯಾಂಗ ವಿಮಲಾಂಗ ವಿಜಯಾಂಗ ಪ್ರಸಾದಂಗ ಇವು ಮಂತ್ರಾಂಗ ಇವು ಪರಶಿವನ ನಾಲ್ಕು ಅಂಗ, ಈ ನಾಲ್ಕು ಅಂಗಕ್ಕೆ ನಾಲ್ಕು ಲಿಂಗಗಳು. ಗುಹೇಶ್ವರ ಲಿಂಗ. ಚಿತ್ಸರೂಪ ಲಿಂಗ ಚಿನ್ವಿಲಾಸಲಿಂಗ. ಇಚ್ಛಿತ ಭೂತಾನ್ಯಲಿಂಗ. ತತ್ವಂಗ ಪ್ರಕಾರ ಪರಶಿವನ ಚತುರ ಲಿಂಗವೆಂದಿತ್ತು, ಸ್ಥೂಲ ಸೂಕ್ಷ್ಮ ಕಾರಣ ಮಹಾಕಾರಣ ಈ ನಾಲ್ಕು ತನುವಿಗೆ ನಾಲ್ಕು ಲಿಂಗಗಳುಂಟು ಗೂಢಸಜ್ಜಕ್ಕೆ ಗುಹೇಶ್ವರಲಿಂಗ. ವಿಧ್ಯಾಂಗ ಸ್ಥೂಲದೇಹ. ನಿಂಬು ಗೊಂಡಿತ್ತು. ವಿಮಲಾಂಗ ಸೂಕ್ಷ್ಮ ತನುವಿನಲ್ಲಿ ಚಿತ್ ಸ್ವರೂಪ ಲಿಂಗಧಂ

ರಣವಾಯ್ತು. ವಿಜಯರ್ಥಾಂಗ, ಕಾರಣ ದೇಹದಲ್ಲಿ ಚಿದ್ವಿಲಾಸಲಿಂಗ ಸಾಹಿತ್ಯ ವಾಯಿತು. ಮಹಾ ಪ್ರಸಾದ ಲಿಂಗ. ಮಹಾ ಕಾರಣದೇಹದಿ ನಿತ್ಯತೃಪ್ತಿಯಲಿಂಗ. ಶಿವನ ನಾಲ್ಕಂಗಗಳಿಗೆ ನಾಲ್ಕು ಅಂಗತಾನೆ ಆಗಿರುವನು. ಮಂತ್ರಾಂಗ ಶುದ್ಧ ತನು. ಸ್ವಯಂಭು ಲಿಂಗ ತತ್ವಂಗಳಿದ್ದ ತನು. ಅಮೃತಲಿಂಗ ಪಿಂಡಾಂಗ ಪ ಶಿದ್ಧತನು ರುಚಿಯಲಿಂಗ. ಪ್ರಸಾದಂಗ ಸ್ವಯ ಶಿದ್ಧತನು. ನಿತ್ಯ ತೃಪ್ತಿಯಲಿಂಗ. ಅನಾಧಿರಂಗೆ ಷಡ್ಗುಣೈಶ್ವರ್ಯ ಸಂಪನ್ನತ್ವಂಗಳುಂಟು ಸರ್ವಕರ್ತೃತ್ವ ಜ್ಞಾತೃತ್ವ ಸರ್ವಂ ತರ್ಯಾಮಿತ್ವ ಸರ್ವೇಶ್ವರತ್ವ ಇಂತು ಷಡ್ಗುಣೈಶ್ವರ್ಯ ಸಂಪನ್ನತ್ವಗಳುಂಟು. ಪರಶಿವ ಮೊದಲಾದ ಶಿವಶಕ್ತಿತ್ರಯ ಮೊದಲಾದ ಸುರ, ನರ; ಉರಗ, ಮನು, ಮುನಿಗಳಿಗೇ ಪ್ರಸಾದ ಬಲದಿಂದ ಸರ್ವಸಿದ್ಧಿ ಸರ್ವ ಮೋಕ್ಷ ಇದರಿಂದ ಫಲವಿಲ್ಲವು ಸ್ಥೂಲದಲ್ಲಿ ಅಡುತ್ತಿಹನು. ಸ್ವಪ್ನದಲ್ಲಿ ಅಜ್ಯೋತಿರ್ಲಿಂಗವು. ಕಂಠದಲ್ಲಿನಿಂದು. ಸೂಕ್ಷ್ಮ ಭೂತದನಾಡಿಸಿ ನೋಡಿ ತೆ.ಜ್ಯೋರೂಪವಾಗಿಹುದು. ಜ್ಯೋತಿರ್ಲಿಂಗ, ಹೃದಯ ಕುವರಕರ್ಣಿಕ ಮಧ್ಯ ಜ್ಯೋತಿ ಕರ್ಪುರಯೋಗ. ಮಗ್ನತೆಯಿಂದ ಸುಷುಪ್ತಿಯನ್ನೈದಿ ಪ್ರಾಜ್ಞನಾಗಿಹನು. ಅಮೃತವನುಂಡು ತೂರ್ಯ ಪ್ರತ್ಯಗಾತ್ಮನಾಗಿಹನು.

ಆಕಾಶದೊಳಗೆ ಪಂಚತತ್ವಗಳುಂಟು. ಶುದ್ಧ ಆಕಾಶದ ವಂಶ ರಾಗ, ವಾಯುವಿನ ವಂಶ ದ್ವೇಷ, ಅಗ್ನಿಯ ವಂಶಭಯ ಅಪ್ಪುವಿನ ವಂಶ ಲಜ್ಜೆ, ಪೃಥ್ವಿ ವಂಶ ಶಿವನೊಡಗೂಡಿದಲ್ಲಿ. ಆಕಾಶ ತತ್ವ ಒಯಲಾಯ್ತು ಆ ಆಕಾರವೇ ಇಷ್ಟಲಿಂಗ ಇಷ್ಟವೇ ಗುರು ರೂಪು. ಪ್ರಸಾದರೂಪೇ ಜಂಗಮ ರೂಪು ಜಂಗಮರೂಪೆ ಲಿಂಗಪ್ರಾಣ ಲಿಂಗವೇ ಪಂಚ ತತ್ವ ಈ ತತ್ವಗಳೇ ಪಂಚ ಬ್ರಹ್ಮವು ಆ ಪಾದ ಮಸ್ತಕಪರ್ಯಂತರ ಇಷ್ಟಲಿಂಗಪರಿಪೂರ್ಣ ಆಇಷ್ಟಲಿಂಗ ಪ್ರಾಣಜಂಗಮವಾಗಿರುವದು. ಆ ಜಂಗಮದ ಪ್ರಾಣ ಪ್ರಸಾದವಾಗಿರುವದು. ಆ ಪ್ರಸಾದ ರೂಪೇ ಭಕ್ತನಾಗಿರುವನೆಂದು ತಿಳಿಯಬೇಕು.

ಜೀವಾತ್ಮನ ಸುಖವೇ ಶಿವಾತ್ಮನ ಸುಖ ಪ್ರಸಾದಮೂರ್ತಿ ಶಿವನು ಜೀವಾತ್ಮನಾದ ಯಾಕೆಂದರೆ ತತ್ವಯುಕ್ತನಾದಲೇಜೀವನಾದ, ಪಿಂಡ

ಮೂರ್ತಿ ಸರ್ವ ವಾಯು ಪರಿಪೂರ್ಣ ಸ್ವರೂಪವೇತಾನೆ ಪರಶಿವನಾದ ಜೀವಾತ್ಮನಾದ ಸಕಲ ಭೋಗಂಗಳು ಶಿವನಿಗೆ ಶಿವನಿಗಾದ ಸುಖವೇ ಜೀವನಿಗ ಶಿವಜೀವರೈಕ್ಯರಿಂದವೇಲೆ ಸುಖ. ದುಃಖಗಳಿಲ್ಲವು. ಜೀವಾತ್ಮನ ಸುಖ ಶಿವಾತ್ಮನಿಗಹುದು ಕಾಯದ ದುಃಖ ಆತ್ಮನಿಗಿಲ್ಲ ಆತ್ಮನದುಃಖ ಕಾಯಕ್ಕಿಲ್ಲ. ಶಿವನ ಸ್ವರೂಪವೇ ಕಾಯವು ಪ್ರಾಣವು ಸ್ವರೂಪವೇ ಆತ್ಮನು ಶಿವಾತ್ಮ. ಜೀವಾತ್ಮಕ್ಕೆ ಪ್ರಸಾದವಂದೇ. ಜೀವನಿಗೆ ದುಃಖಬಡಿಸಲಾಗದು. ಆತ್ಮ ಸ್ವರೂಪನಾದ ಶರಣನು ದುಃಖವನ್ನು ಬಡಿಸಲಾಗದು.

ತತ್ಪುರುಷ ಮುಖದಿಂದ ಹದನೈದು ವಾಯು ನಿಮಿತ್ತವಾದವು ಪ್ರಾಣ, ಉದಾನ, ಸಮಾನ, ವ್ಯಾನ ಅಪಾನ. ಪ್ರಾಣಪಂಚಕವು ನಾಗ ಕೂರ್ಮ, ಕೃಕರ, ದೇವದತ್ತ. ಧನಂಜಯ ಇವು ಪಂಚಉಪವಾಯುಗಳು ಇನ್ನು ಬ್ರಹ್ಮಾಂಡ ಉಪಾಯಗಳು. ವೈರಂಭ, ಮುಖ್ಯ, ಪ್ರಭಂಜನ. ಅಂತ್ರ್ಯಾಮಿ, ಮಹಾ ಪ್ರಾಣ. ಪ್ರಾಣಇಂದ್ರನೀಲವರ್ಣ ಹೃದಯಸ್ಥಾನ ಅಂಗುಷ್ಠದಿಂದ ಶಿಖಾಗ್ರಪರಿಯಂತರ, ವ್ಯಾಪಿಸಿಕೊಂಡಿರುವದು. ಉಸ್ವಾಸ, ನಿಸ್ವಾಸ ಮಾಡುವದು. ಇದೇ ವಾಯುನಿಂದಲೇ ರೇಚಕ ಪೂರಕ ಕುಂಭಕ ಮಾಡಿಯೋಗಿಗಳಾಗುವರು. ಈ ಪ್ರಾಣವಾಯು ಸದ್ಯೋಜಾತ ಮುಖದಿಂದ ಹುಟ್ಟಿರುವದು. ವಾಮದೇವ ಮುಖದಿಂದ ಅಪಾನವಾಯು ಹುಟ್ಟಿರುವದು, ಹರಿತವರ್ಣ ಗುದಸ್ಥಾನದಲ್ಲಿದ್ದು. ಮಲ ಮೂತ್ರವನ್ನು ವಿಸರ್ಜಿಸುವದು. ಅದೋದ್ವಾರ ಬಂಧಿಸಿಕೊಂಡಿರುವದೇ ಧರ್ಮ. ಪ್ರಸಾದ ರಸವನ್ನು ಸರ್ವಾಂಗಕ್ಕೆ ವ್ಯಾಪಿಸಿರುವದೇ ಕರ್ಮ. ಅಘೋರ ಮುಖಂದ ಉದಾನ ವಾಯು ಎಳೆಮಿಂಚಿ ನವರ್ಣ ಕಂಠ ಸ್ಥಾನದಲ್ಲಿದ್ದು ಶೀನು, ಕೆಮ್ಮುಕ್ಯಾಕರಿಸಿ ನಿರ್ದೋದರ್ನೆಯ ಮಾಡಿಸಿ ಪ್ರಸಂದವ ಆಹಾರ ಸ್ಥಾಪನಂಗೈವದು .

ತತ್ಪುರುಷ ಮುಖದಿಂದ ಸ್ವಯಂತನ್ನ ಪ್ರಸಾದವೇ ವ್ಯಾನವಾಯು ಗೋಕ್ಷೀರವರ್ಣ. ಸರ್ವಾಂಗಸಂಧಿಯಲ್ಲಿದ್ದು ಚೇತನ ಅಚೇತನಗಳನ್ನು ಕರ್ಮೇಂದ್ರಿಗಳಿಗೆ ಚೇಷ್ಟಿಸುವದು. ಈಶಾನ್ಯಮುಖದಿಂದ ಪ್ರಸಾದ ಸಮಾನ ವಾಯು ನೀಲವರ್ಣ ನಾಭಿ ಸ್ಥಾನದಲ್ಲಿದ್ದು ಅಪಾದ ಮಸ್ತಕ ಪರಿಯಂತರ

ಥದಪ್ರೈಕೆರ್ರೆಸಿಡ್ಡಿಲ್ಲ ಧರ್ಮ. ಪ್ರಸಾದ : ರಸವನ್ನು ರೋಮ ರೋಮಂಗಳಿಗೆ ಹಂಚುವದೇ ಕರ್ಮ ಇವು ಐದು ಪ್ರಾಣ ಪಂಚಕವು. ನಾಗವಾಯು ಪೀತ ವರ್ಣರೋಮನಾಳಂಗಳಲ್ಲಿರ್ದು ಚಲನೆವಿಲ್ಲದೆ ಹಾಡಿಸುವದು ನುಡಿಸುವದುವಾಕ್ಕಿನಲ್ಲಿ ಸಂಬಿಂಧ ಕೂರ್ಮ ವಾಯುಶ್ವೇತವರ್ಣ ಉದಾರಲಲಾ ಉದಲ್ಲಿರ್ದು ಶರೀರವನ್ನು ಪುಷ್ಟಿಯನ್ನುಮಾಡುವದು. ಬಾಯಿ ಮುಚ್ಚುವದು ತೆರೆಯುವದು ಇದು ವಾಮ ದೇವ ಪ್ರಸಾದವೆಂದು ತಿಳಿ. ಇದು ಹಸ್ತದಲ್ಲಿ ಸಂಬಂಧ. ಮತ್ತು ನೇತ್ರದಲ್ಲಿ ಉನ್ಮೀಲನಂ ಮಾಡಿಸುವದೇ ಧರ್ಮ. ಈ ಕೂರ್ಮ ವಾಯುವನ್ನು ತಿಳಿದಾತನೇ ಯೋಗಿಯು ಯಾಕಂದರೆ ಊರ್ಧ್ವ ದ್ರಿಷ್ಟಿಯಿಂದ ಭ್ರೂಮಧ್ಯಕ್ಕೆ ಇಡುವದು. ಇದು ವಾಮದೇವ ಪ್ರಸಾದವು.

ಅಘೋರ ಮುಖದಿಂದ ಕೃಕರವಾಯು ಹುಟ್ಟಿರುವದು. ಇದು ಆಂಜನ ವರ್ಣ. ನಾಶಿಕಾಗ್ರದಲ್ಲಿರ್ದುಕ್ಷ ದೆ ಧರ್ಮಂಗಳನೆ ಳಿಸಿ ಊರ್ದಾಗೆಮನಾಗ ಮನಂಗಳ ಮಾಡಿಸುವದು. ಈ ವಾಯುಲಕ್ಷಣವನ್ನು ತಿಳಿದಾತನೇ ಜ್ಞಾನಿ ಎನಬೇಕು. ಲಿಂಗಪ್ರಾಣವೆನಿಸುವದು. ಇದು ಪಾದದಲ್ಲಿ ಸಂಬಂಧ ತತ್ಪುರುಷ ಮುಖದಿಂದ ಸ್ವಯಂ ಪ್ರಸಾದವೇ ದೇವದತ್ತ ವಾಯುಎನಿಸುವದು. ಇದು ಸ್ಫಟಿಕ ವರ್ಣ ಗುಹ್ಯ ಸ್ಥಾನದಲ್ಲಿರ್ದು ಏಳಿಸುವದು ಮಲಗಿರುವದು ಮಲಗಿದ್ದನ್ನು ಕುಳ್ಳಿರಿಸುವದು ನಿದ್ರಿಯೇ ಭೇಧಿಸಿ ಹೊರಳಿ ಮಾತಾಡಿಸುವದು ಇದು ತತ್ಪುರುಷ ಪ್ರಸಾದವು.

ಈಶಾನ್ಯಮುಖದ ಪ್ರಸಾದದಿಂದ ಧನಂಜಯ ವಾಯು ನೀಲಂಜನವರ್ಣ ಬ್ರಹ್ಮರಂಧ್ರದಲ್ಲಿರ್ದು ಕರ್ಣದ್ವಾರದಲ್ಲಿರ್ದು ಸಮುದ್ರಘೋಷವಂ ಘೋಷಿಸಿ ಮರಣ ಕಾಲಕ್ಕೆ ನಿರ್ಘೋಷಯುಪ್ಪದು ಮರಣವಾದ ಮೇಲೆ ಊದಿಸಿ ಕೆಡಿಸಿ ೫ ದಿನಕೆ ಪೋಗುವದು. ಈ ವಾಯುವನ್ನು ತಿಳಿದಾತನೇ ದಿವ್ಯ ಯೋಗೀಶ್ವರನು.

### ಇನ್ನು ಬ್ರಹ್ಮಾಂಡ ಉಪವಾಯುಗಳನ್ನು ಹೇಳುವೆವು

ಮುಖ್ಯ ವಾಯು ಧೂಮ್ರವರ್ಣ ಅದು ಸದ್ಯೋಜಾತ ಪ್ರಸಾದ

ತತ್ಪುರುಷ ಪ್ರಸಾದ ಮುಖ್ಯ ಅನಂತ ಕೋಟಿ ಬ್ರಹ್ಮಾಂಡಗಳಿಗೆ ಆಶ್ರಯ ವಾಗಿರುವದು. ಜೀವನಿಗೆ ಸಂಬಂಧ. ವಾಮದೇವ ಮುಖದಿಂದ ಪ್ರಭಂಜನವಾಯು, ಜ್ಯೋತಿರ್ವರ್ಣ ಅಗಣಿತ ಬ್ರಹ್ಮಾಂಡವನ್ನು ಸ್ವಯಂ ತನ್ನೊಳಗೆ ಲೀನ ಮಾಡುವ, ಮಾಡಿಕೊಂಬುವನು, ದಿವ್ಯ ಜ್ಞಾನಿಗಳು ಬಲ್ಲವರೆಂದು ತಿಳಿವದು. ಇದು ಮನಸ್ಸಿಗೆ ಸಂಬಂಧ. ಮನಸ್ಸನ್ನು ಲೀನ ಮಾಡುವದು. ಅಘೋರಮುಖದಿಂದ ವೈರಂಭ ವಾಯು ತಾರಕ ವರ್ಣ ಸರ್ವ ದೇವಾದಿಗಳ ಪೂಜಕನ್ಕ ತಾನಹನು ಆತನೊಬ್ಬ ಪುರುಷನು ತಾನು ಪೂಜ್ಯ ನಾಸಿಕನೆಂಬಬಯಕೆ ಯುಳ್ಳೊಡೆ ವೈರಂಬ ತಾರಕ ವರ್ಣವ ಲಕ್ಷವಿಟ್ಟು ನಾಸಿಕಾಗ್ರದಲ್ಲಿ ಧ್ಯಾನಿಸಲು ಇಹಲೋಕ ಪರಲೋಕ ಪೂಜ್ಯನಹನು. ತಾರಕ ಪ್ರಿಯ, ತಾನಹನೆಂದು ತಿಳಿಯುವದು. ಇದು ಬುದ್ಧಿಗೆ ಸಂಬಂಧವು ತತ್ಪುರುಷ ಮುಖದಿಂದ ಅಂತರ್ಯಾಮಿ ಎಂಬ ವಾಯು ನೀಲವರ್ಣ. ಬ್ರಹ್ಮಾಂಡದೊಳು ಪೂರೈಸಿದ ನಾದ ಪ್ರಕಾಶ ಸುತ್ತಿಹುದು ಯೋಗೇಶ್ವರ ಮನೋ ಮಂದಿರದಿ ನಾದ ಪ್ರಕಾಶದಿಂದ ಪರವಶರಾಗಿಹರು ಕರ್ಣದ್ವಾರದಲ್ಲಿ ಗುರು ವಾಕ್ಯ ಪ್ರಸಾದ ಬೀಜ ಮಂತ್ರವು ತಾನೆಂದರಿಯಲು ಸದ್ಯೋನ್ಮುಕ್ತನಹನು ಇದು ಚಿತ್ತಿಗೆ ಸಂಬಂಧ ಈಶಾನ್ಯ ಮುಖದಿಂದ ಹುಟ್ಟಿದ ಮಹಾ ಪ್ರಾಣವಾಯು ಇದು ಸರ್ವ ವರ್ಣದಿಂದ ಕೂಡಿರುವದು. ಪಿಂಡಾಂಡಕ್ಕು ಬ್ರಹ್ಮಾಂಡಕ್ಕು ಸಕಲ ಪ್ರಾಣಿಗಳಿಗೆ ಆಧಾರ ವಾದದ್ದೆಂದು ತಿಳಿಯಬೇಕು ಇದು ಅಹಂಕಾರ ಸಂಬಂಧ

ಈ ಪ್ರಾಣ ಪಂಚಕದಿಂದ ಸ್ಥೂಲದೇಹವಾಯ್ತು ಉಪ ವಾಯುಗಳಾದ ನಾಗಾದಿ ವಾಯು ಗಳಿಂದ ಸೂಕ್ಷ್ಮಶರೀರವಾಯ್ತು ಮುಖ್ಯ ವಾಯುಗಳಿಂದ ಕಾರಣ ಶರೀರವಾಯ್ತು ಈ ಮೂರು ಶರೀರಗಳನ್ನರಿಯುವದೇ ಮಹಾಕಾರಣ ಶರೀರವಾಗಿರುವದು. ಪ್ರಕಾರದಿಂದ ಪ್ರಾಣವಾಯುಗಳಾದವು ಸಕಾರದಿಂದ ನಾಗಪಂಚಕವಾದವು. ದಕಾರದಿಂದ ಮುಖ್ಯ ವಾಯುಗಳಾದವು. ೭೨೦೦೦ ನಾಡಿಗಳಾಗಿ ಚೇಷ್ಟಿಸುವದೇ ಮುಖ್ಯ ವಾಯು ಸಕಲ ವಿಷಯಾದಿ ಗುಣಂಗಳ ಹಟ್ಟಿಸುವದೇ ವೈರಂಭವಾಯು ಸರ್ವ ಮದದೀ ಗುಣಂಗಳ ಕ್ಷಯವ ಮಾಡುವದೇ ಪ್ರಭಂಜನವಾಯು ಹೃದಯದಲ್ಲಿ ಹಂಸನ ಮಧ್ಯದಳಕ್ಕೆ ತಂದು ಸೋಹಂಕಾರವನೆಬ್ಬರಿಸುವದೇ ಅಂತರ್ಯಾಮಿ

ಎಂಬ ನಾನು ವೃಳಿದ್ದು ತನುತ್ರಯಂಗಳ ನೀಗಿಸಿ ಆತ್ಮನಾತ್ಮನ ಎಚ್ಚರಿಸಿ ಕೊಡುವವೇ ಮಹಾಪ್ರಾಣವಾಯುವೆಂದು ತಿಳಿಯುವದು. ಅಂತಃಕರಣ ಪಂಚಕ ಪ್ರಾಣಪಂಚಕ ನಾಗಪಂಚಕ ಮುಖ್ಯ ಪಂಚಕ ಜ್ಞಾನೇಂದ್ರಿಯ ಪಂಚಕ ವಿಷಯ ಪಂಚಕ ಕರ್ಮೇಂದ್ರಿಯ ಪಂಚಕ ಈ ಮೂವತ್ತೈದು ವಿಶ್ವಾಭಿಮಾನಿಯೆನಿಸಿದನು. ಮೂಲ ಚೈತನ್ಯ ಕೂಡಿ ಮೂವತ್ತಾರು ತತ್ವ ಗಳು ಕೂಡಿ ಸ್ಥೂಲದೇಹವಾಯಿತ್ತು ಇದು ಇಷ್ಟ ಲಿಂಗ ಈ ಇಷ್ಟಲಿಂಗ ಶುದ್ಧಪ್ರಸಾದವೇ ಭಕ್ತಿರೂಪು ಭಕ್ತಿರೂಪೆ ಗುರುರೂಪೆಂದುದು ಷಡ್ಭ್ರಮೆ ಷಟ್ಕ್ಲೇಶ ಅರಿಷಡ್ವರ್ಗ ಸಪ್ತವೆಸನ ಇಂತಿ ಇವೆಲ್ಲವು ಅಷ್ಟಮೂರ್ತಿಯು ಪ್ರಸಾದವಾಕ್ಯ. ಈ ಅಷ್ಟಮೂರ್ತಿಯಿಂದಾದುದೇ ಸ್ಥೂಲ ದೇಹಕ್ಕೆ ವಿಶ್ವ ಜಾಗ್ರಾವಸ್ಥೆ. ಅಕಾರ ಪ್ರಣವ ಸತ್ವ ಗುಣಕ್ರಿಯಾಸಕ್ತಿ. ನೇತ್ರ ಸ್ಥಾನ ಯುಕ್ತ ಭೋಗ. ಅನ್ಯ ಜ್ಞಾನ ಆವರಣ ಶಕ್ತಿ ಸ್ವರೂಪಕ್ಕೆ ವ್ಯಾಪಿಸಲು ಇನಿತುದವೇ ಇಷ್ಟಲಿಂಗವವೇ ಶುದ್ಧ ಪ್ರಸಾದ ತ್ವಂಪದವೇ ಸ್ಥೂಲದೇಹ ವಾಗಿರುವದು.

ಮಂತ್ರಾಂಗ, ತತ್ವಾಂಗ ಪಿಂಡಾಂಗ, ಆ ಪಿಂಡಾಂಗವೇ ಕಾರಣಲಿಂಗ ಈ ಲಿಂಗತ್ರಯವೇ ಪ್ರಸಾದವು ಪ್ರಸಾದ ವಾಕ್ಯವು ಸ್ಥೂಲ ದೇಹವು ಸೂಕ್ಷ್ಮ ದೇಹವೇ ಮಂತ್ರಾಂಗ. ತತ್ವಾಂಗವೇ ಕಾರಣ ದೇಹವು. ಪಿಂಡಾಂಗವೇ ಮಹಾ ಕಾರಣ ಶರೀರವು ಪಿಂಡವಿಡಿದು ಬ್ರಹ್ಮಾಂಡವ ತಿಳಿಯಬಹುದಲ್ಲದೆ ಬ್ರಹ್ಮಾಂಡವಿಡಿದು ಪಿಂಡವ ತಿಳಿಯಬಹುದಲ್ಲದೆ ಮಂತ್ರಾಂಗಕ್ಕು, ತತ್ವಾಂಗಕ್ಕು ಪಿಂಡಾಂಗವೆ ಕಾರಣವೆನಿಸುವದು. ಪ್ರಸಾದವೇ ಮಹಾಕಾರಣಾಂಗ ವೆನಿಸುವದು. ಪ್ರಕೃತಿಗೆ ಪಿಂಡವೇ ಕಾರಣ ಪ್ರಸಾದ ಮಹಾಕಾರಣವೆಂದು ತಿಳಿಯುವದು.

ಮಂತ್ರ ಪಿಂಡಕ್ಕೆ ಪಂಚಭೂತಾತ್ಮ ಸ್ವರೂಪಕ್ಕೆ ತಾನೇ ಸತ್ಯ ಪಿಂಡವೇ ಕಾರಣ ಸರ್ವವಾಯು ಸಂಪೂರ್ಣ ಪಿಂಡ ಮೂರ್ತಿ ಪರಶಿವತಾನೆ ಪ್ರಸಾದಮೂರ್ತಿ. ದಕಾರವೇಪಿಂಡಂಗಪಿಂಡಂಗವೇ ತ್ವಂಪದದಕಾರಣದೇಹ. ಕಾರಣ ಅವಿಧ್ಯ ಸ್ಥೂಲ ದೇಹವೇ ಪಂಚಭೂತ ಸಮೂಹ ಸೂಕ್ಷ್ಮ ದೇಹವೆ ಇಂದ್ರಿಯ ಸಮೂಹ. ವಿಷಯಪಂಚಕವು. ಜಾಗ್ರವು, ಸ್ವಪ್ನವು ಸುಷುಪ್ತಿ

ಯೊಳಡಗಿ, ಇದು ಅಂತಃಕರುಣದೊಳಡಗಿ ಕಲ್ಪನಾ ವಾಸವಾಗಿ ಅಜ್ಞಾನ ದಲ್ಲಿ ಮುಳುಗಿರುವದಿ, ಅಜ್ಞಾನ. ಆವರಣವೇ ಅಜ್ಞಾನ. ಅಜ್ಞಾನದಿಂದ ವಿಸ್ಮೃತ ಜ್ಞಾನ ಅನ್ಯಥಾ ಜ್ಞಾನವೇ ಸ್ಥೂಲದೇಹಕ್ಕೆ ಲೇಪಿಸಿತ್ತು. ಅನ್ಯಥಾ ಜ್ಞಾನಕ್ಕೆ ಆ ಕಾರಣವೇ ಅವಿದ್ಯ. ಅವಿದ್ಯದಿಂದ ಆವರಣ ಶಕ್ತಿ ವಿಕ್ಷೇಪ ಶಕ್ತಿಗಳು ಪುಟ್ಟಿದವು. ವಿಕ್ಷೇಪಶಕ್ತಿಯು ಮನಕ್ಕೆ ವ್ಯಾಪಿಸಿ ಸುಖ ದುಃಖಕ್ಕೊಳಗುವಮಾಡಿತ್ತು. ವಾಸನ ಬುದ್ಧಿಯೇ ಸಂಚಿತಕರ್ಮವೆನಿಸುವದು. ಲಿಂಗದೇಹಕ್ಕೆ ವಾಸವಮಾಡಿ ಭವಭವಾಂತರಕ್ಕೆ ಈಡು ಮಾಡಿತ್ತು. ಆವರಣ ಶಕ್ತಿ ಸ್ಥೂಲದೇಹಕ್ಕೆ ಆವರಿಸಿತ್ತು

ವಿದ್ಯಾಮೂರ್ತಿಯ ವಾಚ್ಯಾರ್ಥವೆಂದುದು ಲಕ್ಷ್ಯಾರ್ಥವೆಂದರೇನು ತತ್ವಂಗ ತ್ವಂಪದ ಶುದ್ಧ ಲಕ್ಷ್ಯಾರ್ಥವ ಪೇಳಿತ್ತು. ಇಂತಿವು ತೋರುವದೆಲ್ಲ ದೃಶ್ಯ ನೀನೇ ದೃಷ್ಟ ದೇಹಾದಿಸ್ಥಾನ ಭೋಗಾದಿಗಳಿಗೆ ತಾನೇ ಸಾಕ್ಷಿ ತಾವಿವರ ಲಕ್ಷಣವೆಂಪರಿಯುವದೇ ಶುದ್ಧ ಲಕ್ಷ್ಯಾರ್ಥ ಇಲ್ಲಿಗೆ ತ್ವಂಪದ ವಿವರ ಸಮಾಪ್ತಿ.

ಪ್ರಕಾರವೇ ಪ್ರಣಮಾಂಗ. ಸಕಾರವೇ ತತ್ವಾಂಗ ದಕಾರವೇ ಪಿಂಡಂಗ. ಲಿಂಗದೇಹ ಲಿಂಗದೇಹವೆಂದಡೆ ಸೂಕ್ಷ್ಮ ದೇಹವೇ ಮನಸ್ಸು. ಮನವೆಂದಡೆ ಮಾಯಾ. ಮಾಯಾವೆಂದಡೆ ವಿಷ್ಣು. ವಿಷ್ಣು ವೆಂದಡೆ ಹಿರಣ್ಯಗರ್ಭವೇ ಸೂಕ್ಷ್ಮದೇಹ. ಸೂಕ್ಷ್ಮ ದೇಹವೇ ಅಂತಃಕರುಣ ಪಂಚಸಮೂಹ ವೇಕೂಡಿ ಲಿಂಗದೇಹವಾಗಿರುವದು. ಹಿರಣ್ಯಗರ್ಭನಿಗೆ ಭೇದವಿಲ್ಲ. ಹಿರಣ್ಯಗರ್ಭನ ವಂಶವೇ ಸೂಕ್ಷ್ಮ ಶರೀರ ಸ್ಥಿತಿಯಾವಸ್ಥೆ ಸ್ವಪ್ನಾವಸ್ಥೆ. ವಿಷ್ಣುವಿನ ವಂಶ ತೈಜಸವೆಂದು ತಿಳಿಯುವದು. ಆ ಮನಸ್ಸೇ ಚಂದ್ರನ ವಂಶ ಆಮನವೇ ಪಿಂಡಂಗ ಸೂಕ್ಷ್ಮ ದೇಹ ಕಾರ್ಯಾ ಕಾರಣಕ್ಕೆ ಭೇದವಿಲ್ಲೆಂದು ತಿಳಿಯುವದು

ಮಹಾಲಿಂಗವು ನೂರಾವಂದು ಸ್ಥಲವಾಗಿರುವದು ತಾನೇ ಅರಿಯು ವಜ್ಞಾತೃತ್ವನೆಂದಡೆ ಜ್ಞಾನ ಚಕ್ಷು. ಜ್ಞಾನ ಚಕ್ಷುವೆಂದಡೆ ಶಿವಲಿಂಗದೇವರು

ತಾನೆಂದು ತಿಳಿಯುವದು. ಇದನ್ನರಿದಾತನೆ ಕಾಯನ್ಮುಕ್ತ. ಜೀವನ್ಮುಕ್ತ. ಪ್ರಾಣ ಮುಕ್ತ. ಇಂದ್ರಿಯನ್ಮುಕ್ತ. ಮನೋನ್ಮುಕ್ತ ಸರ್ವಾಂಗ ಮುಕ್ತ. ಸರ್ವಾಂಗಪ್ರಸಾದಿವೆಂದರಿದುದು ಲಿಂಗದೇಹವು ಸಪ್ತ ಕಲೆಗಳಿಂದ ಕೂಡಿ ರುವದು. ಕಲೆ, ಕಲಿಯು, ನಿಲೆ, ನೇಮ, ವಿದ್ಯ, ಪ್ರಕೃತಿ, ಪುರುಷ, ಇಂತಿವು ಸಪ್ತ ಕಲೆಗಳು. ಕಲೆ ಎಂದರೆ ಸ್ವಪ್ನಕಾಲಕ್ಕೆ ಮಾಡುವ ಮಾಟ, ಸತ್ಯ ವಾಗಿ ಕಾಂಬುವದೀಗ ಕಾಲ ಕಲಿವೆಂದಲ್ಲಿ ಸ್ಥೂಲವೇದಲ್ಲಿ ಸುಕರ್ಮ ದುಷ್ಕ ರ್ಮ, ದುಷ್ಕರ್ಮವ ಮಾಡಿ ಅದರ ಫಲವನುಂಡೆನೆಂದು ಮನದಲ್ಲಿ ವಾಸನೆ ಹಿಡಿದ-ಡೇ ಕಲಿಯು. ನಿಲೆವೆಂದಲ್ಲಿ ಆಕಾಲ ಕಲಿಯಕ್ಕೆ ಸ್ವಪ್ನದಲ್ಲಿ ನಿಲೆ ಯಲ್ಲಿ ವೆವಹರಿಸುವದೇ ನಿಲೆ ನೇಮವೆಂದಲ್ಲಿ ಆ ಸ್ವಪ್ನಕಾಲದಲ್ಲಿ ಆನಿಲೆಯು ತಕ್ಕಹಾಂಗೆ ಬುದ್ಧಿಎಂದು ನಿಶ್ಚೈಸುವದೇ ನೇಮ,

ವಿದ್ಯವೆಂದಲ್ಲಿ ವಿದ್ಯವೇ ಅಜ್ಞಾನವು. ಎಂದು ಇಂತಿ ಕಾಲ, ಕಲಿ, ನಿಲೆ, ನೇಮಕೆ ಅರಿಯುವದೇ ವಿದ್ಯ ಪ್ರಕೃತಿವೆಂದಲ್ಲಿ ಅವಿದ್ಯ ಇದೇ ಮಾಯಾ ಆ ಮಾಯವೇ ಲಿಂಗ ಲಿಂಗದೇಹದ ಸಪ್ತ ಕಲೆಗಳು ಅವಿದ್ಯದಿಂದ ತೋರಿ ತ್ತು. ಆ ವಿದ್ಯೆಯೇಪ್ರಕೃತಿ ಪುರುಷನೆಂದಲ್ಲಿ ಆ ಪ್ರಕೃತಿಗೆ ಅವಿದ್ಯಕ್ಕೆ ಪುರು ಷನೆ. ಬು ೇ ಜೀವವು ಚೈತನ್ಯಸ್ವರೂಪನಾಗಿ ಚೇಷ್ಟಿಸುತಿರ್ದನಾಗಿ ಪುರುಷ ನೆಂದನಿಸಿದ. ಇಂತಿವು ದಿವ್ಯಾಗವುದ ಸಪ್ತಕಲೆಯು. ಲಿಂಗದೇಹದ ವಿವರ ವೆಂದು ತಿಳಿಯುವದು. ಸೂಕ್ಷ್ಮ ಶರೀರಕ್ಕೆ ಅಷ್ಟಪುರಿಗಳಂಪೇಳ್ಪೆನು. ಅವಿದ್ಯ ಕಾಮ್ಯ. ಕರ್ಮಜ್ಞಾನೇಂದ್ರಿಯ ಪಂಚಕ, ಅಂತಃಕರಣ ಪಂಚಕ ವಾಯು ಪಂಚಕ ಕರ್ಮೇಂದ್ರಿಯ ಪಂಚಕ ವಿಷಯ ಪಂಚಕ. ಇಷ್ಟು ಕೂಡಿ ಅಷ್ಟಪುರಿ ವೆನಸಿದ ಕಾರಣವೇ ಅಶ್ರೈಸಿರುವದೆಂಡತಿವುದು ಇದು ತತ್ವದಲ್ಲುಂಟು. ಬುದ್ಧಿ, ಸುಖ ದುಃಖತನು, ಇಚ್ಛೆ ದ್ವೇಷ, ಸಂಸ್ಕಾರ, ಪುಣ್ಯ, ಪಾಪ, ಇಂತಿವು ೯ ಒಂಭತ್ತು ಗುಣ ಲಿಂಗದೇಹಕ್ಕೆ, ಈ ಶರೀರಕ್ಕೆ ಸಕಾರದಲ್ಲಿ ಲಯವೆಂದರೆ, ಸಂಚಿತ, ಪ್ರಾರಬ್ಧ,ನಾಸ್ತಿಎಂದು ತಿಳಿಯುವದು ಪರಬ್ರಹ್ಮ, ಪರವಸ್ತು, ಎಂದು ಪ್ರಕಾರದಲ್ಲಿ ಸ್ಥೂಲದೇಹವೇ ಲಯವನೈದಲು ಪ್ರಾರಬ್ಧ ನಾಸ್ತಿಎಂದರಿವುದು ಸಚ್ಚಿದಾನಂದ ಸರ್ವ ಶೂನ್ಯ ನಿರಹಂಕಾರ ಸದೋದಿತವೆಂದು ಸೂಕ್ಷ್ಮದೇಹ ಲಯವನೈದಲು ಸಂಚಿತ ಕರ್ಮ ನಾಶವು

ಬ್ರಹ್ಮಾಂಡವೇ ಸ್ಥೂಲರೂಪು. ಸೂಕ್ಷ್ಮವೇ ಅಂಡಕಾರವು ಪಿಂಡವೇ ಜೀವನ ಸ್ವರೂಪುಕಾರಣ ಇಂತಿ ಇದರ ಅರುವೆ ಮಹಾ ಕಾರಣ ಪರ ವಸ್ತುವಿಂಗೆ ನಾಲ್ಕುದೇಹವುಂಟು ಬ್ರಹ್ಮಾಂಡವೆಂದರೆ ಪರವಸ್ತು. ಪರವಸ್ತು ಪರಬ್ರಹ್ಮ. ಪರಂಜ್ಯೋತಿ ಸ್ವಯಂಭೂ ಯುರೂಪಿನಿಂ. ಸದೋದಿತ ಆವಾಗಲು ಉದಯಸ್ತ ವಿಲ್ಲದೆ ಬೆಳಗುತಿಹುದಾಗಿ ಸ್ಥೂಲ ಬ್ರಹ್ಮಜಾಗ್ರಾವಸ್ಥೆಯು. ಅಂಡಸೂಕ್ಷ್ಮ ತನುವೆಂದರೆ ಗೋಳಾಕಾರ ಅಂಡಾಕೃತಿಯಾಗಿ ಸ್ಥೂಲ ಕಾಯ ಗಣೇಶ್ವರ ನೊಳಗಿರ್ದು ಆಲಿಂಗದಲ್ಲಿ ತೋರುವ ತೋರಿಕೆದೇವ ತಾಚಕ್ರಗಳೆಲ್ಲವು, ಸ್ವಪ್ನಥೋಪಾಧಿ ಹುಸಿಎಂದರಿಯುವದೇ ಯದೃಷ್ಟಂ ತನ್ನಷ್ಟವೆನ್ನುವದು. ಜ್ಞಾನತೂರ್ಯವೆಂದರೆ ಜಾಗ್ರ ಸ್ವಪ್ನ ಸುಷುಪ್ತಿಯುನರಿದು ಕುರುವು ವಿಡಿದಿಹುದೇ ಜ್ಞಾನವಿದ್ಯುಲ್ಲತೆಯುಂತೆ ದೇವತಾಂದಿಗಳ ಮಾಹಾನುಭಾವ. ದೃಷ್ಟಿಗಳಿಗೆ ಸಿಲ್ಕದಿಹುದೇ ತೂರ್ಯವೆಂದು ಹಾಗುವರ ಜಾಗ್ರವೆಂದು ಮಾಯಾಖ್ಯ ಶರೀರವೆಂದು ಹಾಗುಗುಣಗಂಥಾವಸ್ಥೆಯಿಂದು ತಿಳಿವದು.

ಬ್ರಹ್ಮಾಂಡವೆಂದರೆ ಗುರುತಾನೆ. ಆ ಗುರುಮಂತ್ರ ಸ್ವರೂಪನು ಮಂತ್ರದಿಂದ ಲಿಂಗವನಿರ್ಮಿಸಿದ ಲಿಂಗದೊಳು ಶಿವಶಕ್ತಿ ಮೊದಲಾದ ದೇವಾದಿದೇವರ್ಕಳಿಂದ ಇಪ್ಪತ್ತೈದುತತ್ವಗಳಾದವು ಅಂಡದಲ್ಲಿ ಸ್ಥಿತಿಯು ಪಿಂಡದಲ್ಲಿ ಲಯುವನ್ನೈದಿಸಿ ಪಿಂಡಮೂರ್ತಿ ಲಯುವಾಗಿರುವದು ಗುರು-ಲಿಂಗ-ಜಂಗಮಕ್ಕೆ ಕಾಯ ಜೀವ ಈ ಪ್ರಸಾದದಿಂದಲೇ ಆಗಿರುವವು ಓಂಕಾರವೇ ಪಂಚಭೂತ ಸ್ವರೂಪ ನಕಾರವೇ ದಶೇಂದ್ರಿಗಳು ಮಕಾರವೇ ಕರಣಾದಿ ಪಂಚಕವಾಗಿರುವವು ಶಿಕಾರವೇ ಪ್ರಾಣನಾಯಕ. ವಕಾರವೇ ದಶವಾಯು ಸ್ವರೂಪವಾಗಿರುವದು. ಯಕಾರವೇ ಗುಣತ್ರಯುವಾಗಿಹುದು. ಷಡಾಕ್ಷರವೇ ಷಡಾಂಗವಾಗಿಹುದು. ಪ್ರಜ್ಞಾನದಿಂದ ಪ್ರತಿಷ್ಟಿಯಮಾಡಿ. ಪ್ರಜ್ಞಾನಂ ಬ್ರಹ್ಮಂ ವಿಜ್ಞಾನವಾಯಿತೆಂದೆಡೆ ಉಪಕ್ರಮ ಉಪಸಂಹಾರ ಅದದ್ವೇಮಹದಾನಂದ. ಬ್ರಹ್ಮವೆಂದುದು ತ್ವಂಪದ ಜೀವನಿಗೆ ಮಹಾಕಾರಣ ಶರೀರವೆನಿಸುವದು. ಮಹಾಕಾರಣ ಶರೀರವೆಂದರೆ ದೇಹತ್ರಯುಕ್ಕೆ ಅತೀತವು.

ಸ್ಥೂಲ ಸೂಕ್ಷ್ಮ ಕಾರಣ ಶರೀರವೇ ತುರ್ಯವೆನಿಸುವದು. ಇದಕ್ಕೆ ಪರಜಾಗ್ರ ವೆನಿಸುವದು. ಮೂರಾವಸ್ಥೆಗಳಿಗೆ ಸಾಕ್ಷಿಯಾಗಿರುವದು.

ಇದಕ್ಕೆ ಪ್ರತ್ಯಗಾತ್ಮನೆಂಬ ನಾಮವುಂಟು. ವಿಶ್ವ ತೈಜಸ ಪ್ರಾಜ್ಞ ಈ ಮೂರು ಜೀವರುಗಳಿಗ ಸಾಕ್ಷಿಯಾಗಿರುವನು. ಸತ್ವ ರಜ, ತಮ, ಈ ಮೂರುಗುಣಗಳಿಗೆ ತಾ ಶುದ್ಧ ತತ್ವ ಗುಣವೆಂದನಿಸಿತ್ತು. ಈ ಮೂರು ಅಕ್ಷರಗಳಿಗೆ ತಾಗ ಘನೀಕರಿಸಿರುವದು. ಇದುವೇ ಓಂಕಾರದ ತೂರ್ಯವೇ ವಿಶ್ವನು, ತೂರ್ಯನು, ಮನ, ಪ್ರಜ್ಞಾನಂ ಸತ್ಯಂ ಜ್ಞಾನಂ ಮನಂತಂ, ಅಶಬಳ ಬ್ರಹ್ಮವೇ ಶುದ್ಧ ಜೀವನು ಕೂಟಸ್ಥನೆಂತಲೂ. ಅಂತರ್ಯಾಮಿ ಎಂತಲೂ ಹೆಸರುಂಟು. ಮಾಯಾ ವೇಷ್ಟಿತ ಷಡ್ಗುಣೈಶ್ವರ್ಯ ಸಂಪನ್ನನಾದಂಥ ಶಬಳ ಈಶ್ವರನೇ ಶುದ್ಧ ಜೀವನು. ಈ ಶಬಳ ಜೀವನು ದೇಹತ್ರಯದಲ್ಲಿ ಅವಸ್ಥಾತ್ರಯದಲ್ಲಿ ಸಿಲುಕದೆ. ತಾಪತ್ರಯದಲ್ಲಿ ಸಿಲುಕದೆ ನೊಂದು ಬೆಂದು ಭವಕ್ಕೊಳಗಾಗದೇ ಶಬಳ ಜೀವನು. ಅಹಂ ಸೋಹಿ ಎಂದಕಾರಣ ಭವಬಂಧಿರುವದು.

ಈ ಶುದ್ಧ ಜೀವನೆಂದರೆ ದೇಹತ್ರಯಕ್ಕೆ ಅತೀತ ಅವಸ್ಥಾತ್ರಯಕ್ಕೆ ವಿಲಕ್ಷಣ. ತಾಪತ್ರಯಕ್ಕೆ ಹೊರಗು ಮೂರುಕರ್ಮಂಗಳಿಗೆ ಮೀರಿ ಗುರುಕಾರುಣ್ಯ ಪ್ರಸಾದದಿಂದ ಪ್ರಸಾದ ಸ್ವರೂಪವಾಗಿ ಪರಿಣಮಿಸೆನೆಂಬುದೇ ಶುದ್ಧ ಜೀವನು ಈ ಶುದ್ಧಜೀವನೇ ಪ್ರಸಾದೀಶ್ವರನು. ಈಶ್ವರನೇ ಸರ್ವಸಾಕ್ಷಿತ್ವ. ಸರ್ವಸಾಕ್ಷಿತ್ವವೇ ಮಹಾಕಾರಣ ಸರ್ವಸಾಕ್ಷಿ ಇವುಗಳ ಸ್ವಭಾವವೇ ಐಕ್ಯವುಂಟು.

ಮಹಾಕಾರಣದೇಹ ತುರ್ಯಾವಸ್ಥೆ, ಪ್ರತ್ಯಗಾತ್ಮ ಪ್ರಣವು ಪ್ರಸಾದ ಆತ್ಮ ಜ್ಞಾನಶಕ್ತಿ ಊರ್ಧ್ವಸ್ಥಾನ ಆನಂದ ಅಭ್ಯಾಸ ಭೋಗ ಈಶ್ವರನಧಿದೇವತೆ ತ್ವಂಪದದ ಜೀವನ ಮಹಾಕಾರಣದೇಹವು.

ಲಕ್ಷ್ಯಾರ್ಥವೆಂದರ ವಾಚ್ಯಾರ್ಥವನನತಿಗಳೆದು ತಾಸಾಕ್ಷಿ ಸ್ವರೂಪವೆಂಬುದೇ ಲಕ್ಷ್ಯಾರ್ಥ ವಾಚ್ಯಾರ್ಥವೆಂದಡೆ, ಅವಿದ್ಯ ಸಮೂಹವೆಂದೆನಿರುವದು. ಅವಿದ್ಯ ಸಮೂಹವೇ ದೇಹತ್ರಯ. ಅವಸ್ಥಾತ್ರಯ ವಿಲಕ್ಷಣ ಸಾಕ್ಷಿದೃಷ್ಟನೆಂದಡಿವುದೇ ಲಕ್ಷ್ಯಾರ್ಥ, ತ್ವಂಪದದ ಶುದ್ಧ ಲಕ್ಷ್ಯಾರ್ಥವಾಗಿರುವದು. ಸ್ಥೂಲ ಸೂಕ್ಷ್ಮ ಕಾರಣ ಮಹಾಕಾರಣ, ಜಾಗ್ರ ಸ್ವಪ್ನ ಸುಷುಪ್ತಿ ವರ ಜಾಗ್ರ ತುರ್ಯ, ವಿಶ್ವ ತೈಜಸ ಪ್ರಾಜ್ಞ ಪ್ರತ್ಯಗಾತ್ಮ ಸತ್ವ, ರಜ, ತಮ, ಶುದ್ಧ ಸತ್ವಕ್ಕೆ ಕ್ರಿಯಾ ಶಕ್ತಿ, ಇಚ್ಛಾ ಶಕ್ತಿ, ದ್ರವ್ಯ ಶಕ್ತಿ ಆತ್ಮಜ್ಞಾನಶಕ್ತಿ ಈ ನಾಲ್ಕು ಶಕ್ತಿ

ಯಾರಿಗೆ ತಾನೇ ಸಾಕ್ಷಿ. ಅ ಉ ಮ ಓಂಕಾರಕ್ಕೆ ತಾನೇಸಾಕ್ಷಿ ನೇತ್ರ ಸ್ಥಾನ ಕಂಠಸ್ಥಾನ, ಹೃದಯಸ್ಥಾನ, ಮೂರ್ಧನಿಸ್ಥಾನ ನಾಲ್ಕು ಸ್ಥಾನಗಳಿಗೆ ತಾನೆ ಸಾಕ್ಷಿ ಸರ್ವಕೃತ, ಸರ್ವನೇತ್ರತ್ವ, ಸರ್ವ ಸಂಹಾರತ್ವ ಸರ್ವಸಾಕ್ಷಿತ್ವ, ಸರ್ವ ಭೋಗತ್ವಂ ಸರ್ವ ಅಂತರ್ಯಾಮಿತ್ವ, ಇಂತಿವು ಷಡ್ಗುಣೈಶ್ವರ್ಯಕ್ಕೆ ತಾನೇಸಾಕ್ಷಿ ಅವು ದೃಶ್ಯ. ತಾ ದೃಷ್ಟ ದೃಶ್ಯವೇ ಜೀವ. ದ್ರಷ್ಟನೇ ಶಿವ. ಜೀವ ತ್ರಯಕ್ಕೆ ತಾನೇ ಸಾಕ್ಷಿ. ಆಕಾಶದೊಳು ಮಿಂಚು ತೋರಿ ಅಡಗಿದರೆ ಆಕಾಶವು ಚಲಿಸದೆ ಅಚಲನಾಗಿಹ ತೆರದಿ. ಮನಸಾದಿ ಇಂದ್ರಿಯಂಗಳು ಭೋಗಾದಿ ವಿಷಯ ನೈದಿದರೆ ತಾನು ಆ ವರಿಚ್ಛೆಗೆ ಚಲಿಸದೆ ಇದ್ದರೆ ತಾನೆ ಸಾಕ್ಷಿ ಸರ್ವ ಸಾಕ್ಷಿ ವಿಲಕ್ಷಣನೆಂದರಿವುದೇ ಶುದ್ಧ ಲಕ್ಷ್ಯಾರ್ಥ ತ್ವಂಪದ ವಿವರವು ಸಮಾಪ್ತಿ.

ಅಸಿಪದವೆಂದರೆ ಶುದ್ಧ ಲಕ್ಷ್ಯಾರ್ಥ. ಜೀವೇಶ್ವರ ಪಾದಾತ್ಮವು. ಜೀವಶಿವರ ಉಭಯವು ಪ್ರಸಾದದಲ್ಲಿ ಐಕ್ಯವು. ಪ್ರಸಾದವೇ ಅಸಿಪದ ಪ್ರಸಾದವೇ ತ್ರಿವಿಧಂಗಳಾದವು. ಪ್ರಕಾರ ಅಸಿಪದ, ಸಾಕಾರತತ್ ಪದದಿಂದ ದಕಾರತ್ವಂಪದವು.

ಮಹಾಕಾರಣ ಶರೀರಕ್ಕೆ ತೂರ್ಯಾವಸ್ಥೆ ಪ್ರತ್ಯಗಾತ್ಮ ಅಭಿಮಾನಿ ಓಂಕಾರ ಮಾತ್ರ- ಶುದ್ಧ ಸತ್ವಗುಣ ಆತ್ಮ ಜ್ಞಾನಶಕ್ತಿ ಮೂರ್ಧನಿ ಸ್ಥಾನ ಮಾಯಾ ಸುಜ್ಞಾನ ಈಶ್ವರಾಧಿ ದೇವತ ಇವು ಹತ್ತು ಮಹಾಕಾರಣ ಶರೀರಕ್ಕೆ ಸಂಬಂಧ ಇದು ಅಸಿಪದ ಶೋಧನವೆಂದು ತಿಳಿಯಬೇಕು

ತತ್ವಾವಸ್ಥೆ ರಾಜಸಹಂಕಾರ ಅಕಾರಮಾತ್ರ ಕ್ರಿಯಾಶಕ್ತಿ ನೇತ್ರ ಸ್ಥಾನ ಸೂರ್ಯ ಇವು ವಿರಾಟ್ ಪುರುಷನವಂಶವು.

ಹಿರಣ್ಯಗರ್ಭ ಸ್ಥಿತಿಯಾವಸ್ಥೆ ಸಾತ್ವಿಕಾಹಂಕಾರ ಉಕಾರ ಮಾತ್ರ ಇಚ್ಛಾಶಕ್ತಿ. ಕಂಠಸ್ಥಾನ. ಚಂದ್ರ ಇವು ಆರುಕೂಡಿ ಹಿರಣ್ಯಗರ್ಭಶರೀರ, ಸಕಾರದಲ್ಲಿ ಲಯವಾಗಿರುವವು,

ಅವ್ಯಕೃತ ಲಯಾವಸ್ಥೆ ತಾಮಸಾಹಂಕಾರ. ಮಕಾರ ಮಾತ್ರ ದ್ರವ್ಯಶಕ್ತಿ ಹೃದಯಸ್ಥಾನ ಅಗ್ನಿ ಇವು ಆರು ಕೂಡಿ ದಕಾರದಲ್ಲಿ ಲಯವನೈದಿತೆಂಬ ಮಹಾಪ್ರಸಾದವಾಕ್ಯ

ಅಂಡಸೂತ್ರ ಸರ್ವಸಾಕ್ಷಿ ಶುದ್ಧ ಸತ್ವ ಅಹಂಕಾರ, ಮಾತ್ರ, ಆತ್ಮ

ಜ್ಞಾನಶಕ್ತಿ; ಪರ್ದಿನಿಸ್ಥಾನ, ಇವು ಆರು ಕೂಡಿ, ಅಂಡ ಸೂತ್ರ ಏಕ ಮೇವನದ್ವಿತಿಯಂ ಬ್ರಹ್ಮವಾಗಿರುವದು ಇದನ್ನು ಬಲ್ಲಂಥ ಶಿವಜ್ಞಾನಿಗಳು ಧ್ಯಾನಿಸಿ ಲಕ್ಷಿಸಿಲಯುವನೈದುತಿದ್ದರೆನೆ ಪ್ರಸಾದ ವಾಕ್ಯವು.

ಆಕಾರವು, ನಿರಾಕಾರವು ಇಲ್ಲ ಲಕ್ಷಿಸಲಿಲ್ಲ ಭಾವಿಸಲು ದೃಶ್ಯವು ಇಲ್ಲ ಅದೃಶ್ಯವು ಇಲ್ಲ, ಎರಡನ್ನು ಕಳೆದು ಲಕ್ಷಿಸುತಿದ್ದಾನ . ಶಿವಜ್ಞಾನಿಗಳು.

ತತ್ವದರುವಿಂಗೆ, ತ್ವಂಪದರುವಿಂಗೆ ತಾನರಿದು, ಬಚ್ಚಬರಿಯರುಹೆ ತಾನಾಗಿರುವದೇ ಅಸಿಪದ ಲಕ್ಷಿಸುತ್ತಿಹರು, ಜ್ಞಾನಿಗಳೆಂದುದು,

ಅಂಡ ಪಿಂಡ ಅನಂತಕೋಟಿ ಬ್ರಹ್ಮಾಂಡವನೊಳಕೊಂಡು ಸಭಾಹ್ಯೆ ಬಾದ್ಯಂತರವಾಗಿ ಅಣುವಿಂಗೆಅಣುವಾಗಿ, ರೇಣಕ್ಕೆರೇಣಾಗಿ ಪರಿಪೂರ್ಣವು. ಮಹತ್ವಕ್ಕೆ ಮಹತ್ವವಾದ ಪ್ರಸಾದ ತಾನೇಎಂದುದು ಪ್ರಸಾದ ವಾಕ್ಯ.

ಆತ್ಮನು ಸಕಲ, ನಿಷ್ಕಳ ತಾನೇಗರ್ಭೀ ಗ್ರಹವಾಗಿ ಮತ್ತೊಂದು, ಇಲ್ಲವಾಗಿ ಅನ್ಯಹಾ ತೋಎಂದುದು ಪ್ರಸಾದ ವಾಕ್ಯ ಸಹ ಜಾಂತು ಪದ ವೆಂದು ಧ್ಯಾನಕ್ಕೆ ನಿಲುಕದು ನುಡಿಗೆ ವಚಸಬಾರದು, ವೇದಕ್ಕೆ ವೇದಿಸದ್ಯ ತರ್ಕಕ್ಕೆ ಮುನ್ನವೇ ತೋರದು ಬಚ್ಚುಬರೆ ಅರುಹೆ ಬಯಲಾಗಿ ತಾನೇ ತತ್ವಂಗ ಪಿಂಡಂಗನೆಂದು ಪ್ರಸಾದವಾಕ್ಯ.

ಕಾಯಸ್ಪಟಿಕಾಕಾರ, ಮನಸೇ ಜ್ಯೋತಿ ರೂಪಭಾವವದೆ ಸುವರ್ಣ ಪ್ರಭೆಯುಳ್ಳದ್ದು. ಪ್ರಸಾದ ಮೂರ್ತಿ ಪರಂಜ್ಯೋತಿ ಮತ್ತು ಆಲಿನಹತಸ್ತ್ರೀ. ಲಿಂಗ ಆಕಾರದಲ್ಲಿ ಅಕ್ಷರದ ಬೀಜವಾಗಿ, ಅನಾಹತ ಮೊದಲಾದ ಆರ ಚಕ್ರ ಂಗಳು, ಸಂಭವಿಸದವು ಅದರ ಮುಂದೆ ಸ್ತ್ರೀ ಲಿಂಗ, ಉಕಾರದಲ್ಲಿ ಶಿವಶಕ್ತಿ ಗಳು ಹುಟ್ಟಿದವು. ಪುಲ್ಲಿಂಗ, ಉಕಾರವು. ಮೂರು ಮುದ್ರಿಲಿಂಗವಾಗಿ ಸರ್ವ ವ್ಯಾಪಕವಾಯಿತ್ತು ಅ ಆ ಇ ಈ ಉ ಊಎಂಬ ಅಕ್ಷರ ಕೂಡಿಬಂದು ಮಕಾರವ ಯಿತ್ತು. ಇದು ಬಿಂದುವಿನ ನಿರ್ಣಯು. ನಾದ ನಿರ್ಣಯುವೆಂಬ ರೇನು. ನ ಮ ಶಿ ವ ಯ ಇಂತಿ ಪಂಚಾಕ್ಷರಕೂಡಿ ಓಂಕಾರನಾದ ಬ್ರಹ್ಮ ವಾಯ್ತು. ಇಂತಿ ಈ ಉಭಯವೆ ಜಗದ ಬೀಜ, ನಾದ. ಬಿಂದುವಿನನಿರ್ಣಯ ಈ ಪಂಚಾಕ್ಷರದ ಮೂಲಾಕ್ಷರದ್ಮ ಮಂತ್ರೋಪದೇಶದ ನಿನಿರ್ಣಯ ಇದು ಮಂತ್ರ ಮೂರ್ತಿಯ ವಿದ್ಯಾಂಗವು. ವಿಮಲಾಂಗ ಸೃಷ್ಟಿವೆಂತೆನೆ.

ಓಂಕಾರಕ್ಕೆ ಯಕಾರಕ್ಕೆ ಪ್ರಳಯವಿಲ್ಲ. ಉತ್ಪತ್ಯ ಸ್ಥಿತಿ ಪ್ರಳಯಂಗಳಿಗೆ ಒಳಗಾದವು. ನ ಮ ಶಿ ವ ಈ ನಾಲ್ಕು ಅಕ್ಷರಂಗಳಿಗೆ ಪ್ರಳಯಉಂಟು ನಿರ್ದೇಹಿ, ನಿರಂಜನ. ಚಿದ ನಂದ ಚಿತ್ಪ್ರಕಾಶ ಉಳ್ಳದ್ದು.

ವಿರಾಟ್ ಹಿರಣ್ಯ ಗರ್ಭ. ಅವ್ಯಕೃತ, ಅಂಡ ಸೂತ್ರ ಈ ದೇಹವು. ವಂದಾದ ತತ್ವಂಗ ಮೂರ್ತಿ ತಾನೆಎಂದು ಪ್ರಸಾದ ವಾಕ್ಯ ನಾಲ್ಕು ದೇಹಕ್ಕೆ ನಾಲ್ಕು ಪ್ರಣವಂಗಳು. ಅ ಉ ಮ ಓಂಕಾರತತ್ವಂಗ ಮೂರ್ತಿಯು. ತತ್ವಾಂಗ ಮೂರ್ತಿಗೆ ನಾಲ್ಕುವಾಣಿಗಳು. ಭೂಧರ ಪರ್ವತಂಗಳೇ ಮಧ್ಯಮ ವಾಕ್ಕು ಮನುಷ್ಯರುಗಳಿಗೆ ವೈಖರಿ ಸರ್ಪಂಗಳಿಗೆ ಪಶ್ಯಂತಿ ವಾಕ್ಕು ಗಿಡಗಳಿಗೆ ಪರಾವಾಕ್ಕು ಪಶುಗಳಿಗೆ ಮಧ್ಯಮವಾಕ್ಕು, ಜಾಗ್ರಕ್ಕೆ ವೈಖರಿ ಸ್ವಪ್ನಕ್ಕೆ ಮಧ್ಯಮಿ ಸುಷುಪ್ತಿಗೆ ಪರಾ ವಾಕ್ಕು ತುರ್ಯಕ್ಕೆ ಪಶ್ಯಂತಿ ವಾಕ್ಕೆಂದು ತಿಳಿಯುವದು ಮೂಲಾಧಾರಕ್ಕೆ ಪರಾವಾಕ್ಕು ನಾಭಿಗೆ ಪಶ್ಯಂತಿವಾಕ್ಕು ಹೃದಯಕ್ಕೆ ಮಧ್ಯಮವಾಕ್ಕು. ಕಂಠಕ್ಕೆ ವೈಖರಿವಾಕ್ಕು.

ಮತ್ತು ಪ್ರಾಣದಲ್ಲಿ ಪರಾವಾಕ್ಕು. ನೇತ್ರಕ್ಕೆ ಪಶ್ಯಂತಿ ವಾಕ್ಕು ಶ್ರೋತ್ರಕ್ಕೆ ಮಧ್ಯಮವಾಕ್ಕು. ಜಿಂಹೆಗೆ ವೈಖರಿವಾಕ್ಕೆಂದು ತಿಳಿವದು.

ಖೇಚರ, ಭೂಚರ, ಭೂವನಂಚರ, ಸುರನರೋರಗ, ಅಂಡ ಪಿಂಡ, ಬ್ರಹ್ಮಾಂಡಗಳನ್ನು ಲಯವನ್ನು ಮಾಡುವದೇ ತತ್ವಾಂಗವು.

ತತ್ವಾಂಗ ಮೂರ್ತಿಯೇ ತೂರ್ಯಾಪಕ್ಷಿಯು. ಇದಕ್ಕೆ ಅತೀತವೆ ತೂರ್ಯಾತೀತಾವಸ್ಥೆಯು ವಿಶ್ವ, ತೈಜಸ, ಪ್ರಾಜ್ಞ, ಪ್ರತ್ಯಗಾತ್ಮ, ನೇತ್ರ. ಕಂಠ, ಸೂರ್ಯ. ಚಂದ್ರ, ಹೃದಯಕ್ಕೆ, ಅಗ್ನಿ, ಸುಷುಪ್ತಿ, ಮೂರ್ದಿನಿಸ್ಥಾನ ಬ್ರಹ್ಮಾಂಡ ತೂರ್ಯಾವಸ್ಥ ಪ್ರಸಾದವೆಂಬ ಬೀಜದೊಳಗೆ ಶಿವಶಕ್ತಿ ಎಂಬೆರಡು ಎಲೆಗಳು ಹುಟ್ಟಿದವು ಅದಕ್ಕೆ ಪಂಚಮುಖಗಳೆಂಬ ಐದುಶಾಖೆಗಳಾದವು ಇಧಕ್ಕೆ ಮೂವತ್ತಾರು ತತ್ವಂಗಳೇ ಪುಷ್ಪಗಳಾದವು ಶಿವ, ಜೀವರೆಂಬ ಪಕ್ಷಿಗಳಿಗೆ ಹದಿನೆಂಟು ದೀನಶಿನ ಧಾನ್ಯಗಳೇ ಕಣ್ಣುಗಳಾದವು. ಎಂಭತ್ತುನಾಲ್ಕು ಲಕ್ಷ ಜೀವರಾಶಿಗಳಿಗೆ ಶುದ್ಧಪ್ರಾದವೇ ಗುರು. ಶಿದ್ಧಪ್ರಸಾದವೇ ಲಿಂಗ. ಪ್ರಶಿದ್ಧ ಪ್ರಸಾದವೇ ಜಂಗಮ ಈ ಪ್ರಸಾದವೇ ಮಹಾ ಪ್ರಸಾದ ಭಕ್ತಿ ಪ್ರಸಾದವೆಂದರಿವದು.

ಯೋಗಿಗಳು ಲಂಬಿಕಾ ಯೋಗದಿಂದ ಬ್ರಹ್ಮ ರಂದ್ರಕ್ಕೆ ಜಿಂಹೆ ಎನ್ನಿಟ್ಟ ಜಿನ್ನೃತವನ್ನು ಸ್ವಿಕರಿಸಿದರೆ. ಅಂಗ ಶುದ್ಧಿ, ಮನ ಶುದ್ಧಿ, ಭಾವಶುದ್ಧಿ ಇದಕ್ಕೆ ಶುದ್ಧ ಪ್ರಸಾದವೆನಬೇಕು ಇಂಥಾ ಪ್ರಸಾದವನ್ನು ಶೇವಿಸಲು ಮಲತ್ರ ದೇಹವು ಹೋಗಿ ಪ್ರಸಾದ ದೇಹವಾಯ್ತು. ಮಂತ್ರಶರೀರವಾಯ್ತು. ವಾಯು ಪ್ರಾಣ ಕಳೆದು ಲಿಂಗಪ್ರಾಣಿಯ ಮಾಡಿದ ಶಿವನು. ಕರ್ಮ ಸಂಸ್ಕಾರದೇಹವ ಕಳೆದು ಶಿವ ಸಂಸ್ಕಾರವ ಮಾಡಿದ ಅನಾದಿ ಪ್ರಸಾದಿ ದೇಹವಮಾಡಿದನೆಂದು ತಿಳಿಯ ುವದು. ಲಿಂಗಾಂಗಿ ಲಿಂಗಾತ್ಮನು. ತಾನೇಲಿಂಗದ ರೂಪು ಜಂಗಮ ತಾನೇ ಮಂತ್ರದೇಹಿ ಮಾತ್ಮನು. ತಾನೇ. ಸರ್ವಾಂಗ ಪ್ರಸಾದಿ ತಾನೇ ಆ ಶರಣನ ಸ್ಥೂಲ ಶರೀರವೇ ಗುರು ಸೂಕ್ಷ್ಮ ಶರೀರವೇ ಲಿಂಗ. ಕಾರಣ ಶರೀರವೇ ಜಂಗಮ ಈ ಪ್ರಸಾದವೇ ಮೂರು ಪ್ರಕಾರವು. ಅನಾದಿ ಪ್ರಸಾರವೇ ಮಂತ್ರ ಮೂರ್ತಿ ಆ ಮಂತ್ರ ಮೂರ್ತಿ ಕೊಟ್ಟದ್ದೆ ಪ್ರಸಾದವು ಆ ಪ್ರಸಾದವೇ ಪ್ರಣಮ ಸ್ವರೂಪವು ಆ ಪ್ರಸಾದದಲ್ಲಿ ಮಂತ್ರ ಬೆರೆದು ಮಂತ್ರದಲ್ಲಿ ಪ್ರಸಾದವಿಹುದೆಂದು ತಿಳಿಯುವದು.

ಗುರು ತಾನೆ. ಅನಾದಿ ಪ್ರಸಾದಿ ಪ್ರಸಾದಮೂರ್ತಿ ಪರಶಿವ ಪರಾತ್ಪರ ಗುರು ಮೂರ್ತಿಯ ಮುಖದಿಂದ ಪ್ರಸಾದ ಹುಟ್ಟಿ, ಇದರಿಂದ ಲಿಂಗವಾಯ್ತು ಇದರಿಂದ ಜಂಗಮವಾಯ್ತು. ಇದರಿಂದ ದೇಹವಾಯಿತ್ತೆಂದು ತಿಳಿವದು. ವಂದರೊಳು ಕೂಡಿ ಗುರು ಲಿಂಗ ಜಂಗಮ ಪ್ರಸಾದವು ಭಿನ್ನಿಸಬಾರದು. ಈ ನಾಲ್ಕು ಭಕ್ತಿಯನ್ನೇ ಆಶ್ರೈಸಿಕೊಂಡಿರುವವು. ಪ್ರಸಾದವಿಲ್ಲದೆ ಗುರುವಿಲ್ಲ. ಲಿಂಗವಿಲ್ಲ. ಜಂಗಮವಿಲ್ಲ. ದೇಹವಿಲ್ಲವೆಂದು ತಿಳಿಯುವದು. ಪ್ರಕಾರ ಅರ್ಥ ಸಕಾರವೇ ಪ್ರಾಣ ದಕಾರ ಅಭಿಮಾನವಾಯ್ತು ಗುರುವಿಗೆ ತನು ಅರ್ಪಿತ. ಲಿಂಗಕ್ಕೆ ಮನ ಅರ್ಪಿತ ಜಂಗಮಕ್ಕೆ ಧನವರ್ಪಿತ.

ಗುರುವಿಗೆ ತನು ಅರ್ಪಿಸಿ. ತನು ಶುದ್ಧವಾಯ್ತು. ಲಿಂಗಕ್ಕೆ ಮನವನರ್ಪಿಸಿ, ಮನ ಶುದ್ಧವಾಯ್ತು. ಧನವು ಜಂಗಮಕ್ಕೆ ಅರ್ಪಿಸಿ ಧನ ಶುದ್ಧವಾಯ್ತು ಈ ಮೂರು ಅರ್ಪಿಸಿದ ಭಕ್ತನೇ ಮಹಾ ಪ್ರಸಾದಿ ಶುದ್ಧ, ಶಿದ್ಧ, ಪ್ರಶಿದ್ಧ ಗಳಾದವು. ಅರ್ಥ, ಪ್ರಾಣ, ಅಭಿಮಾನ, ಈತ್ರಿವಿಧ ಭಕ್ತನ ಸಮ್ಮತವಾದ ಕಾರಣ. ಭಕ್ತಪ್ರಸಾದವೇ ಮಹಾ ಪ್ರಸಾದವೆಂದು ತಿಳಿಯುವದು ಪ್ರಸಾ

ದವೇ ದೇಹವಾದ ಮತ್ತು ಲಿಂಗದೇಹವಾದ ಮೇಲೆ ಮಂತ್ರದೇಹವಾದ ಮೇಲೆ ಗುರುಲಿಂಗ ಜಂಗಮ ತಾನೆ ಯಾದ ಮೇಲೆ ಸದಾ ಸುಖಿಎಂದು ಹೇಳಲ್ಪಟ್ಟಿತು. ಪ್ರಸಾದ ದೇಹಿ ಪ್ರಾಣಲಿಂಗ ಮೂರ್ತಿ ಮಂತ್ರ ಮೂರ್ತಿ ಯಾದ ಶರಣನು ನಿರ್ಮಲ ಜಲಧಿಯೋಪಾಧಿಯಲ್ಲಿ ಎಷ್ಟು ಮಲಿನ ಜಲವು ಕೂಡಿದರೆ ಮಲಿನ ಹೊದ್ದುವದೇ ಲಿಂಗದ ಕಾರ್ಯ, ಕಾರಣನಾದ ಶರಣನ ರೋಮ ರೋಮಕೋಟಿ ಲಿಂಗವಾದಮೇಲೆ ಲಿಂಗದೇಹಿ ಸದಾ ಸುಖಿಎಂದು ಶೃತಿಗಳುಂಟು ಲಿಂಗದೇಹಿ, ಲಿಂಗಾತ್ಮ. ಗುರುದೇವತಾನೆ ಜೀವಾತ್ಮ ಅಂತ ರಾತ್ಮ ನೊಳಕೊಂಡ ಪರಮಾತ್ಮನು ತಾನೆ ಪರಂಜ್ಯೋತಿ ಎಂದು ಹೇಳಲ್ಪಟ್ಟಿತು.

ಮಾಯಾ ಮಲತಾಯಿ ರಕ್ತ ಕಾರ್ಮಿಕ ಮಲತಂದಿಯ ವೀರ್ಯ. ಎರಡು ಕೂಡಿದ್ದೇ ಅಣಾಮಲವೆಂದು ತಿಳಿಯುವದು. ತಾಯಿಯ ರಕ್ತದಲ್ಲಿ ದೇಹ ಪ್ರಾಣ ಬಂದಿರುವವು. ತಂದಿ ವೀರ್ಯದಲ್ಲಿ ಜೀವ, ಮನ, ಬಂದಿರುವವು ಹೀಗೆ ತಿಳಿಯುವದು. ಅನಾದಿ ವಸ್ತುವಿಗೆ ಮಾಯಾ ಮಲತ್ರಯಗಳಿಲ್ಲವಾಗಿ ನಿರ್ಮಲ ಸ್ವರೂಪನೆಂದು ಹೇಳುವದರಿಂದ, ಸರ್ವವು ಲಿಂಗದೊಳಗೆ ಏಡ ಗೂಡಿಪ್ಪವಾಗಿ ಅಂಗವಿಲ್ಲವಾಗಿ ಹೀಗಾದಮೇಲೆ ಶರಣರಿಗೆ, ವ್ರತನೇಮಗಳಿ ಲ್ಲವು ವಳಿತೆಂಬುವದು. ನಿಂದೆಸ್ತುತಿಗೊಳಗಾಗದೆ ಮಹಾ ಪ್ರಸಾದವೆಂದು ಹೇಳಲ್ಪಟ್ಟಿತು. ಈ ಪ್ರಸಾದ ಮಹಿಮೆಯನ್ನು ತಿಳಿದಾತನು, ಆತನೇ ಜೀ ವನ್ಮುಕ್ತನು. ಪರಶಿವನು ಪರಂಜ್ಯೋತಿ ಸ್ವರೂಪನು. ತಾನೇಎಂದು ತಿಳಿ ದಾತನೇ ಕಾಯನ್ಮುಕ್ತ. ಪಿಂಡ ಬ್ರಹ್ಮಾಂಡವನೊಳಕೊಂಡಿಪ್ಪ ಪರವಸ್ತುವೆ ತಾರಕ ಬ್ರಹ್ಮ. ದಂಡಕಾಬ್ರಹ್ಮ ಕುಂಡಲಾಬ್ರಹ್ಮ. ಅರ್ಧಚಂದ್ರ ಬ್ರಹ್ಮ. ಬಿಂದು ಬ್ರಹ್ಮ' ಈ ಪಂಚಬ್ರಹ್ಮವನೊಳಕೊಂಡುದೇ ಪರಬ್ರಹ್ಮವು ಶಿವ ಜೀವರುಗಳಿಗೆ ಆತ್ಮಾಧಾರನವನೆ ಪರಮಾತ್ಮ. ಯೋಗೀಶ್ವರ ಯತಿಗಳ ಧ್ಯಾನ ಪೂಜೆ ನಿಮಿತ್ಯವಾಗಿ ಪೂಜ್ಯಲಿಂಗವು ಪೂಜಕ ಭಕ್ತ. ಪೂಜನ ಅಷ್ಟ ವಿದ್ಯಾ ರ್ಚನೆ ಷೋಡಶೋಪಚಾರ. ಎಪ್ಪತ್ತೆರಡು ವಿನಿಯೋಗ. ನೂರಾವಂದು ಧ್ಯಾನ. ಯೋಗೀಶ್ವರರು ಧ್ಯಾನಿಸುವ ಧ್ಯಾನಕ್ಕೆ. ನಾದ, ಬಿಂದು, ಕಳೆಸ್ವ ರೂಪವಾಗಿತ್ತು. ಭಕ್ತರುಗಳು ಪೂಜಿಸುವದಕ್ಕೆ ಗುರುಲಿಂಗ ಜಂಗಮ

ರೂಪನಾಯ್ತು, ಇದೇ ಪ್ರಸಾದವು. ಯೋಗಿಗಳು ಪೂಜಿಸುವದು ಯಾಕೆಂದರೆ ಭಕ್ತರ ಉದ್ಧಾರಗೋಸ್ಕರವಾಗಿ ಪೂಜಿಸುವರೇ ಹೊರ್ತು ತಮ್ಮ ದಶೆಯಿಂದ ಪೂಜಿಸುವರಲ್ಲ. ಅವರು ಯಾವಾಗಲೂ ಮುಕ್ತ ಸ್ವರೂಪರೇ ಇದ್ದಾರೆ.

ತಾನೇ ದೈವ, ತಾನೆ ಭಕ್ತ, ತಾನೆ ಜಂಗಮ. ತಾನೆ ಪ್ರಸಾದಿಎಂದು ತಿಳಿದಾತನೆ ಶಿವನು. ಮತ್ತೆ ಪರವಿಲ್ಲವು, ಯಾವನೇ ಆಗಲಿ ಗುರು ಬೇರೆ. ಲಿಂಗ ಬೇರೆ, ಜಂಗಮ ಬೇರೆಂದು ಭಾವಿಸುತ್ತಿದ್ದರೆ ಆತನಿಗೆ ಪ್ರಸಾದವಿಲ್ಲ. ಅವನಿಗೆ ನರಕ ತಪ್ಪದು ಅನಾದಿ ಶಿವನ ಸಂಸ್ಕಾರ ಪ್ರಸಾದ ಬೀಜವಾದ ನಿಮಿತ್ಯ ಶಿವಭಕ್ತರ ಉದರದಲ್ಲಿ ಜನಿಸಿ, ಲಿಂಗಧಾರಣವಾಗಿ, ಶಿವಪ್ರಸಾದ ಎಣ್ಣೆ ಬೆಣ್ಣೆಗಳನುಂಡು, ಪ್ರಸಾದ ದೇಹಿ ಆದಮೇಲೆ ಮಲದೇಹಿ ಆಗುವನೇ ಬೀಜಾಂಕುರ ನ್ಯಾಯದಂತೆ ಎಂದು ತಿಳಿ ಹಿಂದಿನ ಸಂಸ್ಕಾರ ಮಲ ದೇಹಿಗಳ ಉದರದಲ್ಲಿ ನರದೇಹಿ ಜನಿಸುವನಲ್ಲದೆ ಶಿವಭಕ್ತನಾಗಲರಿಯ ಇಂಥಾ ಮಲದೇಹಿಗಳಿಗೆ ಲಿಂಗಧಾರಣ ಮಾಡಿ ಪಾದೋದಕ ಪ್ರಸಾದವ ನೀಡಿದರೆ ಅವನ ಮಲ ದೇಹ ಶುದ್ಧವಾಗಲರಿಯದು. ಅವನ ಮದೇಹವ ಕಳೆಯದೇ ಅವನಿಗೆ ಲಿಂಗವಕೊಟ್ಟ ಗುರುವಿಗೆ ನರಕ ತಪ್ಪದು. ಇವನಿಗೇಳು ಪ್ರಕಾರದ ದೀಕ್ಷವ ಮಾಡಿದರೆ, ಮಲದೇಹ ಶುದ್ಧವಾಗುವದು. ಬೇವಿನ ಬೀಜವ ಬಿತ್ತಿ ಬೆಲ್ಲದ ಕಟ್ಟೆಯ ಕಟ್ಟಿ, ಜೇನುತುಪ್ಪವ ಹೊಯ್ದರೆ ಮತ್ತಿಷ್ಟು ಕಹಿಯಾಯಿತಲ್ಲದೇ ಸವಿಯಾಗಲರಿಯದು. ಆ ಸಂಸ್ಕಾರ ದೇಹಿಗಳಿಗೆ ಅನುಗ್ರಹವ ಮಾಡಿದರೆ ಅಧಿಕ ಸೂತಕವು. ಹೆಚ್ಚಾಗುವದು. ಇಂಥವರಿಗೆ ಉಪದೇಶವ ಕೊಟ್ಟವರಿಗೆ ನರಕ ತಪ್ಪದೆಂದು ತಿಳಿಯಬೇಕು. ಕಬ್ಬಿಣದ ರೆಟ್ಟವನು ಹೇಮಪುತ್ರನಿಗೆ ಸಮವೆಂದಃಕಾಂಬ, ರತ್ನ ಪಾಷಾಣವನು. ಸಮವೆಂದು ನೋಡುವವನಿಗೆ ಜಾತಿ ಸೂತಕ, ಜನನ ಸೂತಕ, ಪ್ರೇತ ಸೂತಕ ರಜಸ್ವಲಿ ಸೂತಕ, ಎಂಜಲ ಸೂತಕ, ಮಲದೇಹ ಸೂತಕ, ಅರುತರದ ಸೂತಕ ಶರಣ ನಾದಾತನಿಗೆ ಇಲ್ಲವು. ಇಂಥವನಿಗೆ ಜಿಹ್ವೆ ಲಂಪಟ, ಗುಹ್ಯ ಲಂಪಟ ಮುನ್ನವೇ ಇಲ್ಲವು. ಇಂಥಾ ಗುರುವಿನುಪದೇಶದಿಂದ ಉತ್ತಮವಾದ ಸದ್ಭೋಸ್ಮತ್ತಿಎಂದು ಹೇಳಲ್ಪಟ್ಟಿತು ಪ್ರಾಣ ಲಿಂಗೈಕ್ಯ ನಾದ ಇಷ್ಟ ಪರ ನಾದ

ದಲ್ಲಿ ಮುಳುಗಿದ ಮಹೇಶ್ವರನ ಲಿಂಗವ ಸೋಂಕಿದಾಗಳೇ ಎತ್ತತ್ತ ಚಲಿಸದೆ ಇತ್ತತ್ತ ದೇಶಕೋಶ ಮುಕ್ತರಹರೆಂದು ಹೇಳಲ್ಪಟ್ಟಿತು.

ಪ್ರಸಾದಿ ಸ್ಥಲದಲ್ಲಿ ಐಕ್ಯವಾದ ಆತ್ಮನಿಷ್ಠವಾದ ಶಿವಯೋಗೀಶ್ವರನ ಲಿಂಗಸೋಂಕಿದ ಗಾಳಿ ಎತ್ತತ್ತ ಸುಳಿತಿತ್ತು ಅತ್ತತ್ತ ದೇಶದ ನಕರುಗಳು ಮೋಕ್ಷರುಗಳಿಹರೆಂದು ತಿಳಿ. ತಂದಿ ಇಲ್ಲ. ತಾಯಿ ಇಲ್ಲ ನಾಮವಿಲ್ಲ ರೂಪವಿಲ್ಲ, ಕುಲವಿಲ್ಲ, ಆವ ಯೋನಿ ಯಲ್ಲಿ ಜನಿಸಿದಾನು ಅಲ್ಲ, ಪರಶಿವ ಮೂರ್ತಿ ಪ್ರಸಾಧೀಶ್ವರನೆಂದು ಹೇಳಲ್ಪಟ್ಟಿತು.

ಸುಜ್ಞಾನ ರೂಪವೇ ತಾಯಿ, ನಿರಹಂಕಾರವೇ ತಂದಿ ಜಾತವೇ ಪ್ರಸಾದ ಅಜಾತ ರೂಪವೇ ಅಂಗವು ಜಂಗಮವೇ ತನಗೆ ಕ್ರಿಯಾ ಪ್ರಸಾದ ಮೂರ್ತಿಯಾದ ಭಕ್ತರುಗಳೇ ತನಗೆ ಬಂಧುಗಳಾಗಿಹರು, ಶರಣರಿಗೆ ಭಕ್ತಿಯೇ ಭೂಮಿ, ದೇಶವಾಗಿರುವದು ಜ್ಞಾನವೇ ಗರ್ಭ ವಾಗಿರುವದು. ಗುರು ಕುಲದಲ್ಲಿ ಜನಿಸಿದ ಜನ್ಮಭೂಮಿ ಯಾಗಿರುವದು. ತನ್ನ ಬೆಳವಣಿಗೆಯು ಜಂಗಮದೊಳಗಾಗಿರುವದು ಸುಜ್ಞಾನವೇ ತನಗೆ ಮಾತೃ ಸ್ಥಾನ ತಾಯಿಯಾಗಿರುವದು. ನಿರಹಂಕಾರವೇ ತನಗೆ ತಂದಿಯಾಗಿರುವದು. ಬಸವಾದಿ ಪ್ರಮಥರುಗಳೇ ಕುಲ ಬಂದು ಗಳಾಗಿಹರು. ತನ್ನ ಜಾತಿಯೆ ನಿರ್ಮಾಯ ಜಾತಿಯಾಗಿರುವದು. ಅವಿರಳ ಸ್ವರೂಪವೇ ಶರಣನ ಅಂಗವಾಗಿರುವದು. ಬಿಡುವದಿಲ್ಲ ಹಿಡಿಯಲಿಕ್ಕೆ ಹಸ್ತಗಳಿಲ್ಲ ದ್ವೈತವು ಇಲ್ಲ. ಅದ್ವೈತವು ಇಲ್ಲ. ನಿರಾಪೇಕ್ಷೆ ಮುಖ್ಯ ಚಲನಾ ಚಲನವೆಂಡು ಪಾದವಾಗಿರುವದು. ಶಬ್ದ ನಿಶ್ಶಬ್ಧಗಳೆರಡು ಕರ್ಣಗಳಾಗಿರುವವು. ರೂಪು ನಿರೂಪು, ಸಾಕ್ಷಿಯಾಗಿರ್ದ ಕಂಗಳೆಂದು ಹೇಳುವದು ಓಂಕಾರ ಝೇಂಕಾರವೇ ಯಡ ಮುರಿ ಬಲಮುರಿ ಶಂಖ ವಾಗಿರುವದು. ಚರ ಅಚರಕೆ ಅತೀತವಾದುದೇ ಚರಂತಿಯೆಂದು ಹೇಳುವದು ಇಂಥಾ ಯೋಗಿಗೆ ವೈರಾಗ್ಯವೇ ಕಂಥಿ. ಅಣಾಮಲ, ಮಾಯಾಮಲ, ಕಾರ್ಮಿಕ ಮಲವ ಕಳಿದುದೇ ಜೋಳಿಗಿ ಕಾಲಾರಿ, ಕಾಮಾರಿ, ತ್ರಿಪುರಾರಿ ವೃತ್ತ್ಯಗಳಲ್ಲದ್ದೆ, ಹಸ್ತದಂಡ ಕೋಲು, ಜಂಗಮಕ್ಕೆ ಪ್ರಸಾದವೆಂದು ಹೇಳುವದೆಂದು ತಿಳಿ.

ಇಂಥಾ ಶಿವಯೋಗಿಗೆ ಸ್ತುತಿ ನಿಂದ್ಯ ಸಮವೆಂದು ತಿಳಿದದ್ದೇ ಉಭಯ

ಯುಕರ್ಣದ ಮುದ್ರಿ ಶೃತ ವೈರಿಗಳು ಸಮವೆಂದು ತನ್ನಿಷ್ಟರುಗಳೆಂದು ಯುಲ್ಲಾ ಸಮಾನವೆಂದು ಕಾಣುವದೇ ಕಂಗಳು ಹೀಗೆಂದು ತಿಳಿಯುವದು. ವಂದೇ ಭಾವ ಸರ್ವ ಜೀವ ದಯಾ ರೂಪವೆಂದು ತಿಳಿಯುವದೇ ಭಿಕ್ಷಾ ಪಾತ್ರಿ ಇಃಥಾ ಜಂಗಮನು ಎಲ್ಲೆಲ್ಲಿ ಚಲಿಸುವನೋ, ಅವೆಲ್ಲ ಕ್ಷೇತ್ರಂಗಳ ಕರಿ, ಭಾವಿಗಳೆಲ್ಲ ಆತನ ಪಾದ ತೀರ್ಥಗಳೆಂದು ತಿಳಿವದು.

ಆರೂಢನೆಂದರೆ ಸಕಲರೂಪಿ ಬಿಟ್ಟಾತನು. ದೇಹದ ವಿಸ್ಮೃತಿಗಳಿಲ್ಲದೆ ಇರುವವ ಪರಮಾ ರೂಢನು ಅಜಾತ ನೆಂದರೆ ಜಾತಿ ರಹಿತನು. ಅವಧೂತ ನೆಂದರೆ ತನ್ನಂಗದೊಳಗೆ ಕೂರಂಗೇಕಾಗಿರುವನು. ಆಚಾತನೆಂದರೆ ಭವಮು- ಣರಹಿತನು ವೌನಿಎಂದರೆ ದೇಹ ವಿಸ್ಮೃತಿ ಆದಾತನು. ನೋಡುವ ಜನರಿ ಗಹ್ಯಕೆ ಕಾಣುವನು, ತಾನು ಲಿಂಗದಲ್ಲಿ ಶುಚಿಯಾಗಿಹನು. ಲಿಂಗದೇಹಿ ಸದಾ ಸುಚಿಎಂಬ ಶೃತಿಯುಂಟು. ಇಂಥವರೇ ಹೆಣ್ಣು ಗೆದ್ದವರೆಂದು ತಿಳಿಯುವದು.

ಲಿಂಗದೇಹಿಕ ಲಿಂಗಾತ್ಮನಾದ ಶರಣನ ಅಸ್ತಿ ಅನುಪಮವಾಯ್ತು- ಮಾಂಸ ಮಂತ್ರಗೂಪ ವಾಯ್ತು ಚರ್ಮ ಚಿದ್ರೂಪವಾಯ್ತು. ನಾಡಿಗಳೇ ನಿರಂಜನಗಳಾದವು. ರೋಮಂಗಳೇ ಹೇಮ ರೂಪವಾದವು. ಪ್ರಸಾದವೇ ದೇಹವಾಯ್ತು ಈತನೇ ಜೀವನ್ಮುಕ್ತನು. ಕಾಯ ಮ್ಮುಕ್ತಾ. ಪ್ರಾಣಮ್ಮುಕ್ತ ನೆಂದು ಹೇಳಲ್ಪಟ್ಟಿತು. ಆತ್ಮನೇ ಲಿಂಗರೂಪನಾದನು. ಪರಮಾತ್ಮನೇ ಜಂಗಮ ಸ್ವರೂಪನಾದನು ಲಿಂಗ ಜಂಗಮದ ಮಧ್ಯದಲ್ಲಿ ಶರೀರವೆಂದು ಹೇಳಲ್ಪಟ್ಟಿತು. ಕಾಯಶುದ್ಧ ಪ್ರಸಾದ ಜೀವ ಶುದ್ಧಪ್ರಸಾದ ಭಾವ ಪ್ರಶಿದ್ಧ ಪ್ರಸಾದ ಸದ್ಭಾವ ಮಹಾ ಪ್ರಸಾದವೆಂದು ತಿಳಿಯುವದು. ಆಚತುಷ್ಟಕಾದ ಪಾರಬಲ್ಲಾತನು. ಚತುಃಕರಣಾದಿಗಳಲ್ಲಿ ಕೂಡಿ ಹೊಂದದೆ ಅತೀತನು. ಚತುರಂಗ ನಿರ್ದೇಹಿ ಆದಾತನು ತ್ಯಾಗಾಂಗ ಭೋಗಾಂಗ, ಯೋಗಾಂಗ ವಿಶ್ವಂಗಳಿಗೆ ಕೂಡಿ ಹೊಂದದೆ ನಿರ್ದೇಹಿ, ಪ್ರಸಾದ ಮೂರ್ತಿ ಚರಲಿಂಗವೆ ತಾನೆಂದು ತಿಳಿಯುವದು; ಅದರ ಅಮೃತ ಪರಿ ಭೀನನಿ ಅಮೃತ ಸಂಜೀವನ ಅಮೃತ ದೇವಾ ಅಮೃತ ದಿವ್ಯಾಮೃತ ಪಂಚಾಮೃತಗಳಲ್ಲಿ ಉದಾಸೀನ ಮಾಡಿಹನು. ರಾಜಾಧಿ ರಾಜರ ಭೋಗಂಗಳೆಲ್ಲವೂ ಅನಿತ್ಯವೆಂದು ತಿಳಿದಿದು

ವೆನು ವಸ್ತ್ರಶವನ್ನು ದಿವ್ಯಾಂಬರವನ್ನು ನವರತ್ನಖಚಿತವಾದ ಮಣಿ ಭೂಷ ಣಾದಿಗಳೆಲ್ಲ ಭಾವನ್ನ ಮೊದಲಾದ ತಾಂಬೂಲ ಗೀತ ನಾಟ್ಯ ಸ್ತ್ರೀಯರ ಚುಂಬನ ಆಲಿಂಗನ ರತಿ ಸುರತ ಪರವಶ ನಿದ್ರೆ ಅಷ್ಟ ಭೋಗಂಗಳು ಹೇವ ರಿಸಿ, ಹೇಸಿಉದಾಶೀನ ಮಾಡಿಹನು ಇಂಥವನೇ ಶಿವಯೋಗಿಯೆಂದು ತಿಳಿ ಯುವುವದು. ನಿರಾಶೆ ತಾಯಿ ಇದು ಆಕಾಶ ತತ್ವ ನಿರ್ವಿಕಲ್ಪವೇ ಅಪ್ಪುತತ್ವ ನಿಶ್ಚಯುವೇ ತಾನು ತೇಜ ತತ್ವ. ನಿರ್ವಿಕಲ್ಪವೇ ಅಪ್ಪು ತತ್ವ, ನಿಜಯುವೇ ಭೂಮಿ ತತ್ವ. ಪಂಚಭೂತಗಳೇ ಶರಣನ ಶರೀರನಾಗಿರುವದು.

ಕುಂಡಲಿ ಶಕ್ತಿಯು ಗುಣದಿಂದ ಪಂಚತತ್ವಂಗಳು. ಪ್ರಾಣತಾ ಆಕಾ ಶತತ್ವ. ಅವರ ಪ್ರತಿಬಿಂಬವೆ ವಾಯು ತತ್ವ. ಪ್ರಳಯುವೇ ತೇಜ ತತ್ವ. ಪ್ರಚಲ ತಾಜ್ಯ ತತ್ವ. ಪ್ರತ್ಯಂಗವೇ ಮುಖ ಭೂಮಿ ತತ್ವ ಬೀಜ ಧಾನ್ಯ ಪದಾರ್ಥವೆಲ್ಲವು ಜಡ ಸ್ವರೂಪವೆಂದು ಹೇಳಲ್ಪಟ್ಟಿತು. ರಸ ಪದಾರ್ಥಂಗಳು ಅಪು ತತ್ವ. ಅಪುವೇ ಬೀಜವೆಂದು ಹೇಳುವದು. ಆತ್ಮನು ಜೀವನು ಒಂದೇ ಯಾಗಿರುವವು,

ಅನಾದಿ ಸಂಸ್ಕಾರವಿಲ್ಲದೇ ಗುರು ಅಲ್ಲ. ಲಿಂಗವಲ್ಲ ಜಂಗಮುವಲ್ಲ. ಪ್ರಸಾದವಲ್ಲ. ಜೀವನಲ್ಲಾ ಭಕ್ತನಲ್ಲಾ. ದೇವನಲ್ಲ. ಮಂತ್ರವಲ್ಲ. ಈ ಅ ಷ್ಟಾಂಗ ಅನಾದಿ ಸಂಸ್ಕಾರವಿಲ್ಲದೆ ಆಗಲರಿಯದೆಂದು ಹೇಲ್ಪಟ್ಟಿತು ಆದಿ ಶೂನ್ಯವೆಂದಡೆ ಬ್ರಹ್ಮಾಂಡ ಮಧ್ಯ ಶೂನ್ಯವೆಂದರೆ ಪಿಂಡಾಂಡ ಅಂತ್ಯ ಶೂ ನ್ಯವೆಂದರೆ ಪಿಂಡ ಬ್ರಹ್ಮಾಂಡ ಯೋರೈಕ್ಯಂ ಅಸಿಪದ ಸರ್ವಶೂನ್ಯ ನಿರಾ ಕಾರ ಅನ್ನಾವತನಾದ ಬ್ರಹ್ಮವು, ಓಂಕಾರ ನಕಾರ ಕೂಡಿ ಪ್ರಾಣ. ಮ ಉಕೂಡಿ ಅನ್ನ ಉದಕವಾಯ್ತು ಪ್ರಾಣ ಅನ್ನವು ಪ್ರಸಾದದಿಂದಾಯಿತೆಂದು ತಿಳಿವುದು.

ಕಟ್ಟಿಗಿಯೊಳಗಿನ ಅಗ್ನಿಯಂತೆ ಹುಲ್ಲಿನೊಳಗಿನ ಹಾಲಿನಂತೆ. ಶಿವ ಜೀವರುಗಳು ಪ್ರಸಾದದೊಳಗಿದ್ದು ಬಹಿರ ತೋರಿದರು. ಶಾಂತತೀತ ಶಕ್ತಿ ತಾನೆ: ಭರ್ಗೋದೇವಂಗೆ ಚಿಚ್ಛಕ್ತಿಯಾಗಿ ಅಲ್ಲಿ ಹಡದಳು ಪಂಚಪ್ರಮಥರು ಅವರು ಯಾರಂದರೆ ವೃಷಭಕಂಧರ ಭದ್ರಕಂಧರ, ವಿಶ್ವೇಶ್ವರ ಶತಕಂಧರ ವೀರಕಂಧರ ನಾಯಕಿ ಇಂತಿ ಪಂಚ ಪ್ರಮಥರನ್ನು ಪಡೆದಳೆಂದು ತಿಳಿಯು

ಬೇಕು ಪ್ರಸಾದದಿಂದ ಪ್ರಾಣ ಉತ್ಪತ್ತಿಯಾಯ್ತು ಆ ಪ್ರಾಣಕ್ಕೆ ನಾದ
ಬಿಂದು. ಕಳೆ ಆಧಾರ ಅನಾದಿ ಬಿಂದುಗಳಿಗೆ ತಾನೇ ಆಧಾರವು ನಾದಪ್ರಸಾ
ದ ಬಿಂದುವೇ ಪಾದೋದಕ ಕಳೆಭಕ್ತಿ ಲಿಂಗಾತ್ಮನ ಇಷ್ಟಲಿಂಗಕ್ಕೆ ಸುಖ
ಸ್ಥೂಲನು. ಇದರಿಂದ ರೂಪವಾಯ್ತು. ಸೂಕ್ಷ್ಮ ತನುವಿನಿಂದ ಪ್ರಾಣ ಅಂ
ಗವಾಗಿ ಇದಕ್ಕೆ ರುಚಿಯು ಪ್ರಸಾದ, ಕಾರಣ ತನುವಿನಿಂದ ತೃಪ್ತಿ ಪ್ರಸಾದ
ಭಾವಲಿಂಗವಾಯ್ತು. ಆಚಾರಲಿಂಗಕ್ಕೆ ಕರಣಾರ್ಪಣ. ಪಾನಿಗುರು ಲಿಂಗಕ್ಕೆ
ಕಾರ್ಯಾರ್ಪಣ ರುಚಿ ಶಿವಲಿಂಗಕ್ಕೆ ಆರು ಪ್ರಕಾರದ ಬಣ್ಣಗಳ ರೂಪು
ಭಕ್ಷಕಾರ್ಯಾರ್ಪಣ ರೂಪು ಕರಣಾರ್ಪಣ. ಜಂಗಮಲಿಂಗಕ್ಕೆ ಸ್ಪರ್ಶನ
ಪದಾರ್ಥವು ಬಾಹ್ಯವೇ ಕಾರ್ಯಾರ್ಪಣ ಸ್ಪರ್ಶನವೇ ಕರಣಾರ್ಪಣ. ಅನಾ
ಹತ ಚಕ್ರಕ್ಕೆ ಹಂಸ ಗಾತ್ರಿಗೆ ೨೧೬೦೦ ಜಪ ಪ್ರಸಾದ ಲಿಂಗಕ್ಕೆ ಶಬ್ದವೇ
ಕರಣಾರ್ಪಣ ಲೇಹವೇ ಕಾರ್ಯಾರ್ಪಣವೆಂದು ತಿಳಿಯುವದು.

ಕೇಳು ನಿರ್ಮಲ ಪರಮಜ್ಞಾನಿ ವೀರಶೈವರೆಂಬ ಪಂಚಾಕ್ಷರದಿಂದ
ಪರಮತ್ತೊಬ್ಬ ದೇವರಿಲ್ಲವೆಂದು ಹೇಳಲ್ಪಟ್ಟಿತು. ವೀರಶೈವನು ಸರ್ವಕ
ರ್ಮಂಗಳ ನಿವೃತ್ತಿಯಂ ಮಾಡಿ ಶಿವಶಕ್ತಿ ಏಕಾತ್ಮ ಒಂದೇಪ್ರಣವು ವ್ಯಕ್ತ
ಸಗುಣ ನಿರ್ಗುಣ ವಂದನು. ಪಾತಲು ಸ್ವಯಂಭು ಶೂನ್ಯ ತಾನೆಂದು ಹೇಳ
ಲ್ಪಟ್ಟಿತು. ವೀರಶೈವರಿಗಿಂತ ಮತ್ತೊಂದು ಮತವಿಲ್ಲ. ವೀರಶೈವರಿಗಿಂತ
ಮತ್ತೊಂದು ಆಚಾರವಿಲ್ಲ. ವೀರಶೈವರಿಗಿಂತ ಮತ್ತೊಂದು ಮೋಕ್ಷವಿಲ್ಲ.
ವೀರಶೈವರೆಂದರ ಪರಶಿವನು ತಾನಲ್ಲದೆ ಅನ್ಯವಿಲ್ಲೆಂದು ಹೇಳುವದು.

ಬಾಕಿಮತಗಳು ತಮ್ಮ ಸಾಂಪ್ರದಾಯಿಕವಾದ ಕರ್ಮಂಗಳನ್ನೇ
ಬೋಧಿಸುತ್ತಿಹವು ವೀರಶೈವರಿಗೆ ವಿಧಿ ದೀಕ್ಷೋಪಾದಿಗಳಿಲ್ಲ. ವ್ರತ ನೇಮ
ಜಪ, ತಪ, ಹೋಮ, ಯಜ್ಞಶೀಲವೆಂಬ ಕರ್ಮದಿಂದ ಭವ ಭವಕ್ಕೆ ಗುರಿ
ಯಾಗುವರಲ್ಲದೇ, ತತ್ವ ಜ್ಞಾನವ ತಿಳಿದು ಇಹ ಪರವೆಂಬುದನಳಿದು, ತಾನೆ
ಪೂರ್ಣನೆಂದು ತಿಳಿದು ಆಚರಿಸುವದೇ ಜ್ಞಾನಾಚಾರ. ಜ್ಞಾನಾಗ್ನಿ ಪುಟ
ಮಾಡಿ ಭವಾರಣ್ಯದಹಿಸುವದೇ ವೀರಶೈವಾಚಾರ್ಯವೆಂದು, ಹೇಳುವದು.
ಜ್ಞಾನಿಪುರುಷ ಶಿವಯೋಗೀಶ್ವರನು. ಅತ್ಯಂತ ವಿನೋದಾರ್ಥದಿಂದ ಇಷ್ಟ
ವಿದ್ಯಾರ್ಜನೆ ಷೋಡಸುಪಚಾರ ಕರ್ಮವನ್ನು ಕರ್ಮ ಫಲ ಉಂಬದೇ

ನಿರ್ಲೇಪವೆಂದು ಹೇಳುವದು. ಕರ್ಮಿಗಳು ನಾನಾಕರ್ಮವನಾಚರಿಸಿ ಕರ್ಮ ಫಲಗಳ ಒಯ್ಯಿಸಿ, ಮಾಡುವದೇ ಭವಕ್ಕೆ ಹೇತುವೆಂದು ತಿಳಿ ಇರವು ವೀರ ಶೈವ ಷಟ್‌ಸ್ಥಲ ಬ್ರಹ್ಮ ಜ್ಞಾನಿಗಳು. ತತ್ವಮಸಿ ವಾಕ್ಯವನ್ನು ವಿಚಾರಿಸಿ ಅಂಗ ಲಿಂಗ ಸಾಮರಸ್ಯವ ತಿಳಿದು ನಿಶ್ಚೈಸುವರೇ ಸದ್ಯೋನ್ಮುಕ್ತಿ ಮಾರ್ಗ ವೆಂದು ತಿಳಿವದು.

ಬಾಕಿ ಮಸ್ಕರು ಕರ್ಮಕಾಂಡಿಗಳು ಇವರಿಗೆ ಸ್ವತಂತ್ರವಿಲ್ಲವು. ವೀರ ಶೈವಾಚಾರ್ಯರ, ಸ್ವತಂತ್ರವಾದವರು. ಜಗತ್ತೇ ಇಷ್ಟಲಿಂಗಸ್ವರೂಪವೆಂದು ಇದೇ ಪರಬ್ರಹ್ಮ ಸ್ವರೂಪವೆಂದು ಸದ್ಭಕ್ತರ ಉದ್ಧಾರಕ್ಕೋಸ್ಕರ ಪೂಜಿಸು ವರು. ವೀರಶೈವವೆಂಬ ನ ಮವು ಕಿವಿಯಲ್ಲಿ ಕೇಳಿ ವೀರಶೈವವೆಂಬ ನಾಮ ವನ್ನು ಜಿಂಹೆಯಲ್ಲಿ ಉಚ್ಚರಿಸಿ ಸ್ತೋತ್ರವ ಮಾಡಿ ಕೊಂಡಾಡಿ, ವೀರಶೈವ ವೆಂಬ ಪಂಚಾಕ್ಷರವ ವ್ಯಾಖ್ಯಾನವಂ ಮಾಡಿ ತಿಳಿದು ಲಿಂಗಕ್ಕೆ ಮುಖ ಯಾವುದೆಂದರೆ, ಜಂಗಮವೆ ಮುಖವಾಗಿರುವದು. ಜಂಗಮಕ್ಕೆ ಲಿಂಗವೇ ಮುಖವಾಗಿರುವದು. ಲಿಂಗ ಜಂಗಮವೇ ವಿಶೇಷವೆಂದು ಹೇಳಲ್ಪಟ್ಟಿತು. ಲಿಂಗಕ್ಕೆ ಜಂಗಮವೇ ಹೃದಯವಾಗಿರುವದು. ಲಿಂಗ ಜಂಗಮ ಏಕಾತ್ಮ ವೆಂದು ಹೇಳಲ್ಪಟ್ಟಿತು ಲಿಂಗಕ್ಕೆ ಜಂಗಮವೇ ಪ್ರಾಣವಾಗಿರುವದು ಜಂಗ ಮಕ್ಕೆ ಲಿಂಗವೇ ಪ್ರಾಣ ವಾಗಿರುವದು ಪ್ರಾಣವೇ ಲಿಂಗ ಮನವೇ ಜಂಗ ಮ ಲಿಂಗದ ರೂಪು ಜಂಗಮ ತಾನೇ ಜಂಗಮದ ರೂಪು ಲಿಂಗವಾಗಿರು ವದು. ಎರಡೆಂದು ಭಾವಿಸಲಾಗದು. ಲಿಂಗದ ಪ್ರಸಾದ್ಯ ಜಂಗಮಕ್ಕೆ ಅರ್ಪಿತ ವಹುದು. ಲಿಂಗವೆಂದರೆ ಶಿವನು. ಜಂಗಮವೆಂದರೆ ಜ್ಞಾನ. ಈ ಎರಡೂ ಕೂಡೇ ಇದ್ದಾವು. ಜ್ಞಾನೇಂದ್ರಿಯಗಳಲ್ಲಿ ಐದು ಲಿಂಗಗಳ ಮುಖವೇ ಮನ ಮನವೆಂಬ ಜಂಗಮ. ಈ ಜಂಗಮ ತೃಪ್ತಿಯಾದರೆ ಐದು ಲಿಂಗಗಳು ತೃಪ್ತಿ ಯಾಗುವವು. ಗಂಧದಿಂದ, ರುಚಿಯಿಂದ ರೂಪಿನಿಂದಲೂ ಸ್ಪರ್ಶನ ದಿಂದಲೂ ಶಬ್ದದಿಂದಲು. ತೃಪ್ತಿಯಾಗುವವು. ಇವುಗಳಲ್ಲಿ ಸಂಚರಿಸುವ ಮನವೇ ಜಂಗಮ ಇದು ತೃಪ್ತಿಯಾದರೆ. ಲಿಂಗಗಳು ತಾವೇ ತೃಪ್ತಿಯಾ ಗುವವು.

ಪರಶಿವ ಮೊದಲಾದ ದೇವಾದಿದೇವರ್ಕಳು ತೃಪ್ತಿಪಡಲ ಕರ್ಶಿಕಾ

ಮಧ್ಯದಲ್ಲಿ ಆಡುವ ಪರಮಹಂಸನು ತಾನೇ ಜಂಗಮ ಲಿಂಗವೆಂದು ಎಂತ್ರ ಧಾರಿ ಎಂದು ಈ ಶರೀರಕ್ಕೆ ಆಧಾರವೆಂದು ತಿಳಿ ಇಷ್ಟ ಲಿಂಗಕ್ಕೆ ಮುಖ ಯಾವುದೆಂದರೆ ಊರ್ಧ್ವ ಮುಖ ಮತ್ತು ಗೋಮುಖವೆಂದೆನ್ನುವರು. ಈ ಲಿಂಗವು ತನ್ನಷ್ಟಕ್ಕೆ ತಾನೇತೃಪ್ತಿಯಾಗದು. ಜಂಗಮಲಿಂದಲೇ ತೃಪ್ತಿ ಯಾಗುವದು ಈ ಲಿಂಗಕ್ಕೆ ಮುಖ ಯಾವುದೆಂದರೆ ಅಘೋರ ಮುಖವೆಂದ ರಿಯುವದು.

ಋಗ್ವೇದಕ್ಕೆ ಗುರುವೇ ಕೃರ್ತವಾಗಿರುವನು. ಎಜುರ್ವೇದಕ್ಕೆ ಲಿಂಗವೇ ಕರ್ತೃಯಾಗಿಹನು ಸಾಮವೇದಕ್ಕೆಜಂಗಮವೇಕರ್ತನಾಗಿಹನು. ಅಥರ್ವ ಣ ವೇದಕ್ಕೆ ಆತ್ಮನೇಕರ್ತವಾಗಿಹನು

ಇಷ್ಟಲಿಂಗವು ಪೃಥ್ವಿ ವಂಶ. ಅಂಗವು ಪೃಥ್ವಿವಂಶ. ಅಂಗವೇ ಇಷ್ಟ ಲಿಂಗ ತಾನೇ ಗುರು, ಪ್ರಾಣವೇದೇಹ, ಭಾವವೇ ಪರಬ್ರಹ್ಮವಾದ ನಿಮಿ ತ್ಯವೃತ ಕರ್ಮ, ಜಪ, ತಪ, ಹವನ, ಯಜ್ಞ, ಅನುಷ್ಠಾನ, ಯೋಗ, ಕುಲಕರ್ಮ, ಆಶ್ರಮ ಕರ್ಮ, ಶ್ರೈವಕರ್ಮ? ವ್ಲಿಂಥ ಕರ್ಮ. ಇಂತಿ ದಶ ಅಷ್ಟ ಕರ್ಮಂಗಳ, ಕರ್ಮ ಕಾರ್ಯವಿನಿಂದ ಪೂಜಗೊಳ್ಳುವದೇ ಶಿವಲಿಂಗವು ಈ ಶಿವಲಿಂಗವು ಭಕ್ತರ, ಕರ, ಮನ, ಉರ, ಶಿರ, ನಯನಂಗಳೆಲ್ಲಿ ಹೆರೆ ಹಿಂಗದೆ ಮೂರ್ತಿ ಯಾಗಿರುವನು. ಯೋಗೀಶ್ವರನ ಕಂಗಳ ಕೊನೆಯಲ್ಲಿ ಯಾವಾಗಲೂ ಹೆರೆಹಿಂಗದೇ ಮೂರ್ತಿಯಾಗಿರುವನು. ಯೋಗೀಶ್ವರನ ಕಂ ಗಳ ಕೊನೆಯಲ್ಲಿ ಯಾವಾಗಲೂ ಹೆರೆಹಿಂಗದೇ ನಿತ್ಯವಾಗಿರುತಿಹ ಶಿವಲಿಂ ಗವು. ಎತ್ತನೋಡಿದಡತ್ತ ಅಲ್ಲಲ್ಲೆ ಭರಿತವಾಗಿ ವಿಶ್ವಾನಿ ವಿಶ್ವಂಗಳೊಳ ಹೊರಗೆ ತುಂಬಿಹನು. ಶಿವಲಿಂಗವು ಆಚಾರಲಿಂಗ ಗುರುಲಿಂಗಗುರು ಮೂರ್ತಿ ತಾನೇ ಶಿವಲಿಂಗ, ಜಂಗಮಲಿಂಗವಂ ದಾಡ ಮೂರ್ತಿ ತಾನೇ ಪ್ರಸಾದಲಿಂಗ. ಮಹಾಲಿಂಗವು ಕೂಡಿ ಜಂಗಮಲಿಂಗತಾನೇ ಪೂಜೆಗೊಂ ಬಗೋಶ್ವರ, ಗುರುವೇ ಲಿಂಗತಾಯಾಯಿತ್ತು. ಲಿಂಗವೇ ಭಕ್ತನಾಗಿ ಭಕ್ತನೇ ಲಿಂಗವಾಗಿ, ಲಿಂಗವೇ ಈಶನು. ಜೀವನೇ ಭಕ್ತನಾಗಿರುವನು

ಸತ್ತು, ಚಿತ್ತು, ಆನಂದ: ನಿತ್ಯ, ಪರಿಪೂರ್ಣ ಇವು ಗುರು ನಾಮಾ ಮೃತವೆಂದು ಹೇಳಲ್ಪಟ್ಟಿತು. ಗುರು ನಾಮವೇ ಶುದ್ಧ ಪ್ರಸಾದವೆಂದು

ಗುರುರೂಪವೇ ಪರಂಜ್ಯೋತಿ ಎಂದು ಗುರುವಾಕ ವೇ ಪರಮ ಮಂತ್ರಕೋಟಿ ಯಹುದೆಂದು ಹೇಳುವದು. ಗುರುವೆಂದರೆ ಗುಕಾರವೇ ಶಕ್ತಿ ರೂಪವು ರುಕಾರವೇ ಶಿವರೂಪವಾಯ್ತು. ಪ್ರಾಣಕ್ಕೆ ಗೂಢವಾಗಿರುವದು. ಶಕ್ತಿ ಕಾಯ ಸ್ವರೂಪವು ಶಿವನೇ ಪ್ರಾಣಸ್ವರೂಪನು. ಆ ಕಾಯ ಪ್ರಾಣ ಒಂದಾದ ಗುರುಮೂರ್ತಿಎಂದು ತಿಳಿ

ಶಕ್ತಿ ಸ್ವರೂಪನೇ ಶಿಷ್ಯನಾದಜೀವನು, ಶಿವಸ್ವರೂಪನಾದ, ಗುರು ತಾನೇ ಗುರುಶಿಷ್ಯರು ಒಂದೇ ಆತ್ಮ ಒಂದೇ ಪ್ರಾಣ ಒಂದೇ ದೇಹ ಒಂದೇ ಬ್ರಹ್ಮಾಂಡವೇ ಮಹಾಲಿಂಗವೆಂದು ಕರದೊಳಗೆ ಧರಿಸಿರ್ದನೆಂದು ತಿಳಿಯ ಬೇಕು;

ಗುಣವು ಇಲ್ಲ; ಗಾಯತ್ರಿ ಮಂತ್ರಗಳಿಲ್ಲ, ವರ್ಣವು ಇಲ್ಲ, ಅವರ್ಣವು ಇಲ್ಲ, ದೃಶ್ಯವು ಇಲ್ಲ, ಏನೇನುವಿಲ್ಲ, ಸ್ವಯಂಭು ಗುರು ತಾನೇ ಇರುವನು. ತಾನು ತನ್ನಷ್ಟಕ್ಕೆ ಹರುಷಾನಂದದಿಂದ ಉಬ್ಬಿ ಚಿತ್ತದಿಂದ ಹೇಮ ಕಟಾಕ್ಷ ದಿಂದ ನಿರೀಕ್ಷಿಸಿ ನೋಡಲು ನಾದ ಮೋರುತಿ ಉದ್ಭವವಾಯ್ತು. ನಾದ ಮೂರ್ತಿಯೇ ಗುರು ಸ್ವರೂಪವೆಂದು ಹೇಳಲ್ಪಟ್ಟಿತು, ಶಿಕ್ಷ್ಯನ ಪ್ರಾಣವೇ ಗುರು ಕಾಯ. ಪ್ರಾಣ, ಗುರುಶಿಷ್ಯ ಸಮವೆಂದು ಹೇಳಬೇಕು ತಾನೇ ಶಿಷ್ಯ ನಾದ ತಾನೇ ಮಂತ್ರನಾದ ತಾನೇ ಕ್ಷೇತ್ರನಾದ, ತಾನೇ ಬೋಧಕನಾದ ಗುರುಶಿಷ್ಯರ ಭಾವವಂದೇ ಎಂದು ತಿಳಿಯುವದು. ಪ್ರಸಾದವೇ ಬಸವಾದಿ ಪ್ರಮಥರಿಗೆ ನಿಜರೂಪವಾದ ಗಣೇಶ್ವರರೇ ಆಚಾರ್ಯರಾದರು ಅಚಾರಿಂಜಿಣಿ ರೇವಣಶಿದ್ಧ ದೇವರು, ಮರುಳಶಿದ್ಧದೇವರು, ಪಂಡಿತಾರಾಧ್ಯರು. ಏಕೋರಾ ಮಯ್ಯ ಇಂತಿ ನಾಲ್ಕು ಆಚಾರ್ಯರೂಪಾದ ಪ್ರಸಾದಮೂರ್ತಿ ತಾನೇ, ವಿಶ್ವ ರಾಧ್ಯರು. ಗುಣಸ್ವರೂಪವೇ ಗುರು, ನಿರ್ಗುಣ ಸ್ವರೂಪವೇ ಲಿಂಗವಾಗಿರು ವದು, ಇದೇ ಜಗದಾದಿ ಲಿಂಗವು. ಸಗುಣ ನಿರ್ಗುಣ ಸ್ವರೂಪವೇ ಜಂಗಮ ವಾಗಿರುವದು.

ಈಡಾನಾಡಿಯೇ ಭಾಗೀರಥಿಯು. ಪಿಂಗಳ ನಾಡಿಯೇ ಯಮುನಾ ನದಿಯು. ಸುಷುಮ್ನೆಯು ಸರಸ್ವತಿ ತ್ರಿವಿಧ ಗಂಗೆಯ ಸಂಗಮವೇ ತ್ರಿಕೂಟ ತ್ರಿವೇಣಿ ಎನಿಸಿತು. ತ್ರಿವೇಣಿಯಂದಾದ್ದೆ ಗುರು. ಗುರುವೇತಾ ಮಂತ್ರ

ಮೂರ್ತಿ, ಆ ಮಂತ್ರಮೂರ್ತಿ. ಆ ಮಂತ್ರ ಮೂರ್ತಿ ಗಾಯತ್ರಿ ಹೃದಯವುಎಂದು ಹೇಳಲ್ಪಟ್ಟಿತು. ಚಲಿಸುವ ಚಲನವೇ ತ್ರಿವಿಧಸ್ವರಂಗಳು. ಅವು ಯಾವೆಂದರೆ. ಪೂರಕ, ಕುಂಭಕ. ರೇಚಕ. ತ್ರಾಟಕ ಇಂತಿವು ನಾಲ್ಕು ಪಾದವು. ತ್ರಾಟಕ ತಾನೇ ಪ್ರಸಾದ ಸ್ವರೂಪ. ಅದು ಅಕ್ಷರಾತ್ಮಕ, ಓಂಕಾರ ತಾನೇ ಗಾಯತ್ರಿಯೆಂದು ಹೇಳಲ್ಪಟ್ಟಿತು ಪೂರಕಕ್ಕೆ ಗುರು ಅಧಿದೇವತೆ ಕುಂಭಕ್ಕೆ ಲಿಂಗ ಅಧಿದೇವತೆ. ರೇಚಕಕ್ಕೆ ಜಂಗಮನಧಿದೇವತೆ. ತ್ರಾಟಕ ಸ್ವರಕ್ಕೆ ವೃಷಭನಧಿ ದೇವತೆಎಂದು ತಿಳಿಯಬೇಕು.

ಪೂರಕಕ್ಕೆ ಅಕಾರ. ಕುಂಭಕಕ್ಕೆ ಉಕಾರ, ರೇಚಕಕ್ಕೆ ಮಕಾರ, ತ್ರಾಟಕಸ್ವರಕ್ಕೆ ಊ ತಾನೆ ಅರ್ಧಾ ಮಾತ್ರೆ, ಇಂತು ಚತುರ್ಮೂರ್ತಿ ಕೂಡಿ ಓಂಕಾರವಾಯಿತ್ತು. ನಾಲ್ಕು ವೇದವು ಗುರು ಮುಖದಿಂದ ಹುಟ್ಟಿದವು. ಅಕಾರದಿಂದ ಋಗ್ವೇದ ಹುಟ್ಟಿತು. ಉಕಾರದಿಂದ ಎಜುರ್ವೇದ ಹುಟ್ಟಿತು. ಮಕಾರದಿಂದ ಸಾಮವೇದ ಹುಟ್ಟಿತು. ಅರ್ಧಾ ಮಾತ್ರೆ ಎಂಬ ಪ್ರಣಮದಿಂದ, ಅಥರ್ವಣವೇದ ಹುಟ್ಟಿತು. ಇಂತಿ ನಾಲ್ಕು ವೇದಗಳು ನಿನ್ನಸ್ವಾಸಿನಲ್ಲಿ ತೋರುವವು.

ಷಡಂಗಂ ನಾಲ್ಕು ಪಾದವು, ಶ್ರೇಯಸ್ಥಾನವು ಪಂಚ ದೇವತೆಗಳು. ಇನಿತಾಪನೊಳಕೊಂಡು. ಓಂಕಾರವು ನರಿವಾತನೇ ಬ್ರಹ್ಮಜ್ಞಾನಿ ಬ್ರಾಹ್ಮಣನು. ಹಾಗು ಬ್ರಹ್ಮ ನಾಂಚ ಬ್ರಾಹ್ಮಣನೆಂದು ಶೃತಿಗಳಿರುವವು. ಹಾಗು ವೀರಶೈವಲಿಂಗಿ ಬ್ರಾಹ್ಮಣನೆಂದು ತಿಳಿಯಬೇಕು.

ಅರಿಯುದವನೆಂದು ಅಂತ್ಯಜನೆಂದು ಹೇಳಲ್ಪಟ್ಟಿತು. ಓಂಕಾರವು ಸ್ವಯಂಭು ವಾಗಿರ್ದು. ತನ್ನಲ್ಲಿ ನಿಮಿತ್ಯ ವಿಲ್ಲದೆ ಸ್ಫುರಿಸಿ. ಧೂಮಾಕಾರವಾಗಿ; ದೆಶೆಧೂಮ್ರ ಕೂಡಿ ಅರ್ಧಅಣುವಾಗಿತ್ತು. ಆ ಅರ್ಧಾ ಅಣುವೇ ಅಣುರೂಪಾಗಿ, ಎರಡು ಅಣುಗಳು ಕೂಡಿ ಒಂದು ಧೃತವಾಯಿತ್ತು. ಆಧೃತವೇತಾನೇ ಬಿಂದುಗೋಳಾಕಾರವು ಆಗಿರುವದು, ಆ ಗೋಳಾಕಾರವೇ ಬ್ರಹ್ಮ ತಾನೇ ಆಯಿತ್ತು ತನ್ನ ಲೀಲೆಗೋಸ್ಕರ ಲಂಬಿಸಿ ನಿರಾಲಂಬವು. ಆನಿರಾಲಂಬ ಲಗುತಾನೆ ನಾದ ಬ್ರಹ್ಮನಾದವಾಯಿತ್ತು. ಆ ನಾದ ಬಿಂದು ಕಳೆಎಂಬ ಗುರುವಾಯಿತ್ತು. ಗುರು ಲಘು ಕೂಡಿಕೊಂಡು ಮಂತ್ರ ಮೂರ್ತಿ ತಾನಾ

ಯಿತೆಂದು ಹೇಳಲ್ಪಟ್ಟಿತು. ಆ ಓಂಕಾರಕ್ಕೆ ಅ ಉ ಮ ಮಾತ್ರಿಯಾಯ್ತು. ಅದು ಹೇಗೆಂದರೆ ? ಅಂ ಊಂ ಮಾಂ ಅರ್ಧ ಮಾತ್ರಿ ಕೂಡಿ ಓಂಕಾರವು ಉಚ್ಚರಿಸಲಿಕ್ಕೆ ಬಂದಿತ್ತು. ಅಕಾರ, ಉಕಾರ, ಮಕಾರ ಅರ್ಧ ಮಾತ್ರಿ ಕೂಡಿನಾದ ವಾಯ್ತು ಇದರಿಂದ ಸರ್ವ ಅಕ್ಷರ ನಾದವೆಂದು ತಿಳಿಯಬೇಕು

ಅಕಾರದಲ್ಲಿ ಋಗ್ವೇದ ಹುಟ್ಟಿತು. ಇದರಲ್ಲಿ ವೈಖರಿ ಹುಟ್ಟಿತು. ಉಕಾರದಲ್ಲಿ ಮಧ್ಯಮವಾಕ್ಕು ಇದರಲ್ಲಿ ಎಜುರ್ವೇದ ಹುಟ್ಟಿತು. ಮಕಾರದಲ್ಲಿ ಪಶ್ಯಂತಿ ವಾಕ್ಕು ಇದರಲ್ಲಿ ಸಾಮವೇದ ಹುಟ್ಟಿತು. ಅರ್ಧ ಮಾತ್ರಿಯಲ್ಲಿ ಪರಾವಾಕ್ಕು ಇದರಲ್ಲಿ ಅಥರ್ವಣ ವೇದ ಹುಟ್ಟಿತು ಈ ವೇದಗಳಲ್ಲಿ ಪೂರ್ವ ಪಕ್ಷ ಉತ್ತರ ಪಕ್ಷವೆಂದು ಎರಡು ಭೇಧವುಂಟು. ಪೂರ್ವ ಪಕ್ಷವು ಕರ್ಮ ವನ್ನು ಬೋಧಿಸುವದು. ಉತ್ತರ ಮೀಮಾಂಸವು ಜ್ಞಾನವನ್ನು ಬೋಧಿಸುವದು ಉತ್ತರವೇ ಜ್ಞಾನಕಾಂಡ ವೇದಾಂತ ಸಾರ, ಈ ವೇದಾಂತಕ್ಕೆ ಷಡಂಗ ಉಂಟು ಆ ಕಾರಣ ಷಡಂಗ. ವೇದಾಂತವೆಂಬುವದು.

ಷಡಂಗವೆಂದರೇನು. ಪ್ರಥಮ ಪಂಚೀಕರಣ ಎರಡನೇ ತ್ರಿಪಾದ ಮಹಾ ವಾಕ್ಯ. ವೇದಾಂತ ಹೃದಯ. ಮೂರನೇ ಲಕ್ಷಣತ್ರಯ ನಾಲ್ಕನೇ ಬೇಧತ್ರಯ ಐದನೇ ಕರ್ಮತ್ರಯ ಆರನೇ ಮುಕ್ತಿ ಪಂಚಕ ವಿವರ ಹೀಗೆ ಷಡಂಗವು ಇದೇ ಪಂಚೀಕರಣವೆಂದು ಹೇಳಲ್ಪಟ್ಟಿತು. ಸತ್ವಕ್ಕೆ ಐದುಗುಣ ರಜಕ್ಕೆ ಹದಿನೈದುಗುಣ. ತಮಕ್ಕೆ ಹತ್ತುಗುಣ. ಈ ಕರ್ದಮವೆಂದರೇನು. ಕರ್ದಮ ಎರಡುಭಾಗಮಾಡಿದರು ಒಂದುಭಾಗ ಸೂಕ್ಷ್ಮ ದೇವತಾ ಮಾಯಾ ಹಿರಣ್ಯ ಗರ್ಭವಾಯ್ತು. ಎರಡನೇ ಭಾಗ ಪಂಚೀಕರಣ ಮಾಡಿ ಬ್ರಹ್ಮಾಂಡ ರಚಿಸಿತ್ತು. ಇದು ವಿರಾಟ್ ಪುರುಷನ ಸಪ್ತಪಾತಾಳ ಪಾದವು. ಏಕ ವಿಂಶತಿ ಸ್ವರ್ಗ. ಮಕುಟವು ಇದರಲ್ಲಿ ಚರಾಚರ ಪುರುಷ ಇವಂಗೆ ಸುಷುಮ್ನ ವೇದ ವಿಶರ್ಜಿಸಿತ್ತು.

ಎರಡನೇ ಲಿಂಗವು ತತ್ಪದವು. ಈಶ್ವರನು. ತ್ವಂಪದವು ಜೀವನು. ಶಿವಜೀವರೈಕ್ಯವೇ ಅಸಿಪದವು- ಈ ತ್ರಿವಿಧಪದವೇ ಸಾಮವೇದವು- ತತ್ಪದ ಸರ್ವೇಶ್ವನಿಗೆ ನಾಲ್ಕು ದೇಹಉಂಟು ಬ್ರಹ್ಮಾಂಡ. ಹಿರಣ್ಯ ಗರ್ಭಮಾಯಾ ಮೂಲಪ್ರಕೃತಿ. ಈ ನಾಲ್ಕು ದೇಹಕ್ಕೆ ನಾಲ್ಕು ಅವಸ್ಥೆಯು.

ಉತ್ಪತ್ತಿ ಸ್ಥಿತಿ, ಲಯ, ಈ ಮೂರು ಪ್ರಪಂಚದ ಸಾಕ್ಷಾತ್ ಸರ್ವೇಶ್ವರ ಸರ್ವಸಾಕ್ಷಿ. ಅವಸ್ಥೆ ಇವು ನಾಲ್ಕು ದೇಹಕ್ಕೆ ನಾಲ್ಕು ಅಭಿಮಾನವು. ಬ್ರಹ್ಮ, ವಿಷ್ಣು, ಮಹೇಶ್ವರ ಸರ್ವಜ್ಞ. ಸರ್ವ ಸಾಕ್ಷಿ, ಸರ್ವೇಶ್ವರ ಈ ನಾಲ್ಕು ಅಭಿಮಾನಿಎಂದು ಹೇಳಬೇಕು.

ತ್ವಂಪದ ಜೀವನಿಗೆ ನಾಲ್ಕು ದೇಹವುಂಟು. ಸ್ಥೂಲ ಸೂಕ್ಷ್ಮ ಕಾರಣ ಮಹಾಕಾರಣ ಜಾಗ್ರ ಸ್ವಪ್ನ ಸುಷುಪ್ತಿ ತುರ್ಯವೇ ಅವಸ್ಥೆಗಳು ಸ್ಥೂಲ ಶರೀರ ಜಗದಭಿಮಾನಿಯು ವಿಶ್ವ. ಸೂಕ್ಷ್ಮ ಶರೀರ ತೈಜಸ ಕಾರಣ ಶರೀರ ಜೀವದಅಭಿಮಾನಿಯು ಪ್ರಾಜ್ಞ ಆ ಅಜ್ಞಾನ ಲಕ್ಷಣ. ಅಹಂಕಾರ ನನಗೆ ಅರಿಯೆನೆಂಬ ಮೂರಕ್ಕೆ ಸಾಕ್ಷಿ ಆತ್ಮನು, ಹೀಗೆ ಅಭಿಮಾನ ಹೊಂದುವನು ಪ್ರತ್ಯಗಾತ್ಮ ಏವಂಜೀವದ ಅವಿದ್ಯ ಪ್ರಪಂಚವೆಂದುದು

ಇನ್ನು ಅಸಿಪದದ ಈಶ್ವರನಿಗೆ ಸಮರಸ ಮಾನ್ಯವಾಗಿಲ್ಲ. ಈ ಎರಡು ಪದದ ದೃಶ್ಯ ಶಬಳವಂಶಿಸಿವಾರಿಸಿ ಇಲ್ಲಿ ಅಲ್ಲಿ ಉಳಿಯಿತ್ತು- ಸಾಕ್ಷಿ ಚೈತನ್ಯ ಬ್ರಹ್ಮಾಂಡ ಸ್ವರೂಪು ಸ್ವಯಂಪ್ರಕಾಶ. ಸ್ವಯಂ ವೇಧ್ಯ ಸ್ವಯಂ ಜೋತಿ ಪೂರ್ಣ ಬ್ರಹ್ಮ ಕೈವಾಲ್ಯ ಶುದ್ಧ ಬುದ್ಧ ನಿತ್ಯಾಸ್ಪದ. ಅಖಂಡ ಉಳಿಯಿತ್ತು ಎರಡು ಪದದ ಸ್ವರೂಪ. ತಾನೊಬ್ಬನೇ ಆತ್ಮ, ಮಾಯಾ, ಉಪಾಧಿ, ತತ್ಪದ ಈಶ್ವರ ಅವಿದ್ಯೊಪಾಧಿ ಜೀವ, ಎರಡವು ಪಾಧಿ ಶೋಧಿಸಿ ಉಳುಮೆಯ ಪೂರ್ಣ ಪ್ರತ್ಯೆಕಾ ಚೈತನ್ಯಾ ವಂದೇ ನಿಶ್ಚಲ ಧೃಡದಲ್ಲಿ ಐಕ್ಯವಾಯಿತ್ತು. ಇವು ಎರಡು ಪ್ರವೆದೇಶತ್ ವಂದೇ ಏಕರಸ ಬ್ರಹ್ಮವಿದು. ಮಹಾ ವಾಕ್ಯ ಸಾಧನವೆಂದು ತಿಳಿವದು.

**ಇಲ್ಲಿಗೆ ಎರಡನೇ ಅಂಗ ಸಮಾಪ್ತಿಯು.**



# ಇನ್ನು ನೂರನೇ ಅಂಗಸ್ಯಯ ಲಕ್ಷಣವನ್ನು ಹೇಳುತ್ತೇನೆ.

ಸಾಲೋಕ್ಯವೆಂದರೆ ಈಶ್ವರನ ಲೋಕದಲ್ಲಿರುವದು ಸಾಮೀಪ್ಯವೆಂದರೆ ಈಶ್ವರನ ಸಮೀಪದಲ್ಲಿರುವದು. ಸಾರೂಪ್ಯವೆಂದರೆ ಈಶ್ವರನಂತೆ ರೂಪು ಹೊಂದುವದು. ಸಾಯುಜ್ಯವೆಂದರೆ ಈಶ್ವರನು ತನ್ನ ಸ್ವರೂಪದಲ್ಲಿ ಕೂಡುವನೋ ಆಗ್ಗೆ ಅವನಿಗೆ ಮುಕ್ತಿಯಾಗುವದು. ವಿದೇಹ ಮುಕ್ತಿ ಎಂದರೆ ಸದಾಶಿವನಲ್ಲಿ ಕೂಡುವದು. ಹಂಹಧ್ಯಾನವಮಾಡಿ ಸದಾ ಹೃದಯಕಮಲದಲ್ಲಿ ಚಿಂತಿಸಿದರೆ ದೇಹ ಬೀಳಲಿಕ್ಕೆ ತಾನು ಅದೇ ರೂಪು ಹೊಂದುವನು. ಇದು ಸ್ವರೂಪ ಮುಕ್ತಿ ಎಂದು ಹೇಳುವದು,

ಸಗುಣಸಾಯುಜ್ಯವೆಂದರೇನು. ಘಾಳಿ ಜೋತಿ ಕೂಡಿ ಒಂದೇ ಮಾರುತವಾದಂತೆ ಬಸವಣ್ಣ ಕೂಡಲ ಸಂಗನ ಉದರ ಹೊಕ್ಕು ಕೂಡಲ ಸಂಗಮನಾಥನ್ಹಾಂಗೆ ಇದೇ ಸಾಯುಜ್ಯವೆಂದು ತಿಳಿ.

ನಿರ್ಗುಣ ಸಾಯೋಜ್ಯವೆಂದರೆ ಹ್ಯಾಗೆ ಘಟಾಕಾಶ ಮಠಾಕಾಶವೆಂಬ ಉಭಯನಾಮವೋ ಘಟ ಮಠದೊಳಗೆ ತುಂಬಿರ್ದ ಬಯಲು ತಾನೊಂದೆ ಘಟವೆಂದರೆ ಪಿಂಡ ಮಠವೆಂದರೆ ಬ್ರಹ್ಮಾಂಡ ಪಿಂಡ ಬ್ರಹ್ಮಾಂಡಕಳೆದು ಉಳಿದದ್ದೋ ಪರವಸ್ತು. ಇದಕ್ಕೆ ಐದನೇ ಮುಕ್ತಿ ಹೀಗೆ ಷಡಂಗ ವೇದಾಂತವಾಯ್ತು. ಧ್ಯಾನ ಮೂಲೋ ಗುರೋರ್ಮೂರ್ತಿ. ಪೂಜ್ಯ ಮೂಲೋ ಗುರೋ ಪಾದಂ ಮಂತ್ರ ಮೂಲೋ ಗುರೋರ್ವಾಕ್ಯಂ. ಮುಕ್ತಿ ಮೂಲೋ ಗುರು ಕೃಪಃ. ಹೀಗೆ ಶೃತಿಯುಂಟಾಗಿ ಗುರು ಮೂರ್ತಿಯನ್ನು ಹೃದಯದಲ್ಲಿ ಮರಿಯದವಂಗೆ ಬ್ರಹ್ಮಾಂಡ ಸಾಯುಜ್ಯ ಮುಕ್ತಿಯಾದೀತು, ಈ ನಾಲ್ಕು ಮುಕ್ತಿಗಳೆಂದು ತಿಳಿ.

ರೂಪಿನೊಳು ನಿರೂಪು ಸ್ವರೂಪ. ರೂಪೇ ಶರೀರ. ನಿರೂಪೆ ಪ್ರಾಣ ಆ ನಿರೂಪಿನೊಳಗಣ ರೂಪೆ ಪರಂಜೋತಿ ಸ್ವರೂಪು. ನಿರೂಪು. ಸ್ವರೂಪೆ ಬಿಂದು ನಿರೂಪೆ ನಾದ ಸ್ವರೂಪೆ ಕಳೆ ನಾದ ಬಿಂದು ಕಳೆ ಒಂದಾದ ಗುರು ನಾಮ ಪ್ರಸಿದ್ಧತೆಯೆಂದು ಹೇಳಲ್ಪಟ್ಟಿತು. ಗುಹರೂಢ ರೂಪಾಗಿ ಗುಣನಾಮ ಪ್ರವರ್ತಿಸುವದು. ಪ್ರವರ್ತಿಸುವದೇ ಕರ್ಮರೂಪು ಮೂರ್ತಿ ಗೂಢ

ರೂಪ ತಾನೇ ಆತ್ಮನು. ಲಿಂಗವೇ ಪ್ರಾಣ, ಆತ್ಮಲಿಂಗ ವೆಂದಾದದ್ದೆ ಗುರು ಮೂರ್ತಿತಾನೆಂದು ಹೇಳಲ್ಪಟ್ಟಿತು. ಗುಹವೇ ಅಂಗತತ್ವ ಅದು ಪಂಚಭೂತ ಸ್ವರೂಪ. ಸ್ವರವೇ ಲಿಂಗತತ್ವ ಆ ಗುಹೇಶ್ವರ ರೂಪೆ ವಿಶ್ವರೂಪು, ಆ ವಿಶ್ವ ರೂಪೆ ಗುರು ತಾನೇ ಪರವಿಲ್ಲವೆಂದು ಹೇಳಲ್ಪಟ್ಟಿತು.

ಪ್ರಾಣ ಸ್ವರೂಪವೇ ಈ ಕಾಯ ಕಾಯಪ್ರಾಣ ವಂದಾದ ಅರುವೇ ಗುರುರೂಪೇ ಪರಾತ್ಪರ ಪರವಸ್ತು ಎಂದು ತಿಳಿವದು.

ಅಂಗವೆಂದರೆ ಜೀವ. ಆತ್ಮತತ್ವ ಸರ್ವ ಬ್ರಹ್ಮಾಂಡಕ್ಕೆ ಗೂಢವಾಗಿರುವದು ಲಿಂಗವೇ ವಿಶ್ವರೂಪು. ಸರ್ವ ಬ್ರಹ್ಮಾಂಡಗಳಿಗೆ ಸೂತ್ರಧಾರಕ. ಚೈತನ್ಯಾತ್ಮಕನೆಂದು ಹೇಳಲ್ಪಟ್ಟಿತು. ಅಂಗವೇ ರೂಪು. ಲಿಂಗವೇ ಪ್ರಾಣ ಅಂಗಲಿಂಗವಂದಾದದ್ದೇ ಗುರು ಗುಹೇಶ್ವರನೆಂದು ಹೇಳಲ್ಪಟ್ಟಿತು.

ಶಕ್ತಿರೂಢ ಸ್ವರಂಶಿವಾಃ ಶಿವಶಕ್ತಿ ವಂದಾದದ್ದೇ ಶಿವರೂಪು. ಶಿಕಾರವೇ ಶಿವರೂಪು ವಕಾರವೇ ಪುರುಷಸ್ವರೂಪು. ಸಾಕಾರಕ್ಕೆ ವಿಕಾರ ಕೂಡಲು ಪ್ರಕೃತಿ. ಪ್ರಕೃತಿತಾ ಶಿಕಾರ ವಕಾರವೇನಿವೃತ್ತಿಯಾಯ್ತು. ಆ ನಿವೃತ್ತಿಯೇ ಶಿವನು. ಆ ಶಿವಶಕ್ತಿಗಳೊಂದಾದ ಪರವಿಲ್ಲವೆಂದು ಹೇಳಲ್ಪಟ್ಟಿತು.

ಶಿಕಾರವೇ ಕರ್ಮಾಂಗ. ತಾನೇ ಶಕ್ತಿಸ್ವರೂಪು. ವಕಾರವೇ ಜ್ಞಾನಾಂಗ ಶಿವಸ್ವರೂಪವೇ ಕರ್ಮಜ್ಞಾನವಂದಾದ ಶಿವಭಕ್ತಿ ಎನಿಸುವದು. ಇವೇ ಶಿವರೂಪು.

ಶಿವನೇ ಗುರು. ಗುರುವೇ ಶಿವನೆಂದು ಹೇಳಲ್ಪಟ್ಟಿತು. ಭಕ್ತಿ ಕರ್ಮವಂದಾದಶಿಕಾರ ಅದೆಂತೆನೆ. ಪ್ರಸಾದವಾಕ್ಯಂ. ಗುರು ಲಿಂಗ. ಜಂಗಮವನರ್ಪಿಸುವದೇ ಕರ್ಮ. ಅರ್ಥ, ಪ್ರಾಣ. ಅಭಿಮಾನದಲ್ಲಿ ವಂಚನೆಯಿಲ್ಲದಿಹುದೇ, ಭಕ್ತಿ ವಕಾರತ್ವವೇ ಜ್ಞಾನ, ವೈರಾಗ್ಯವೆನಿಸುವದು, ಜ್ಞಾನವೆಂದರೆ ತನ್ನ ನಿಜ ಸ್ವರೂಪವೆಂದು ತಿಳಿದು, ಆ ನಿಜ ಸ್ವರೂಪವ ತಿಳಿದು ಸ್ವರ್ಗಾದಿ ಫಲ ಪ್ರಾಪ್ತಿಗಳ ಹೇಯ ಮಾಡುವದೇ ಆರೂಢ ವೈರಾಗ್ಯವೆನಿಸುವದು. ಗುರುವೇ ಕರ್ಮಾಂಗಳ ಸ್ವರೂಪು, ಲಿಂಗವೇ ಭಕ್ತಿ ಸ್ವರೂಪು ಜಂಗಮವೇ ಜ್ಞಾನಾಂಗ ಸ್ವರೂಪ ಶಿವಭಕ್ತ ಕಾಯ ಗುರು ಪರವೆಂದು ಹೇಳಲ್ಪಟ್ಟಿತು

ವೀರಶೈವರಿಗೆ ಸತ್ಕರ್ಮ. ಶಿವದೀಕ್ಷೆ ಮಾನಸ ಪೂಜೆಎಂದರೆ ಇಷ್ಟ ಲಿಂಗ ಪೂಜೆಯನ್ನು ಈ ಕರ್ಮವನ್ನು ಈಶ್ವರಾರ್ಪಣವನ್ನು ಮಾಡಿದರೆ ಭೋಗ ಮೋಕ್ಷವಾಗುವದು.

ಶಿಕಾರವೇ ಗೂಢ ಕಾರಂ- ವಕಾರವೇ ಪ್ರಣಮಸ್ವರೂಪವಂ. ಕಾಯ ಪ್ರಾಣವೆಂದರೆ ಭಕ್ತಿಕರ್ಮವೇ ಕಾಯುವಾಗಿರುವದು. ಲಿಂಗಜಂಗಮಪ್ರಾಣ ವಾಗಿರುವದು. ಪ್ರಾಣವೆಂಬಲಿಂಗಕ್ಕೆ ಮನವೆಂಬಜಂಗಮ ವಾಗಿರುವದು. ಕಾಯ, ಪ್ರಾಣ ಶಿವತಾನೇ ಗುರು ಆ ಗುರು ಪರಾತ್ಪರವಾಗಿರುವ. ಜಂಗಮ ವೆಂದು ಹೇಳಲ್ಪಟ್ಟಿತು. ಶಿ ಶಿವನು. ವಾದೀರ್ಘವಾದರೆ ಇದರಲ್ಲಿ ಶಕ್ತಿ ಕೂಡಿ ಬ್ರಹ್ಮಮಾಯಾವಾದವು. ಶಿವನು ಪಾರ್ವತಿಗಳಿಬ್ಬರು ಎಂದರೆ ಇವರಿಗೆ ನಮಃ ನಮಸ್ಕರಿಷುತ್ತೇನೆ, ಶಿಕಾರ ಶಿವಾಲಯ ವಕಾರವೇ ಲಿಂಗಪೀವತನಾದ ದೇಹವೇದೇವಾಲ್ಯವು. ಪ್ರಾಣವೇ ಪರಶಿವ ಮೂರ್ತಿ. ಆ ಕಾಯವೇ ಜೀವ ವಂದಾದ ಗುರು ವೆಂದು ಹೇಳಲ್ಪಟ್ಟಿತು. ಗೂಢವೆಂದರೆ ಶಕ್ತಿ ಶಕ್ತಿ ಎಂದರೆ ಜೀವನ ರೂಪು ಜೀವನೆ ಾಡನಾಡುವದೇ ಪ್ರಾಣ ಆ ಪ್ರಾಣವೇ ತಾಶಿವನು ಶಿವನೇ ಚೈತನ್ಯಾತ್ಮಕ. ಕಾಯಪ್ರಾಣವೆಂದರೆ ಶಿವಶಕ್ತಿ ಶಿವ ಜೀವ ಏಕೋದೇವರೆಂದು ಹೇಳಲ್ಪಟ್ಟಿತು.

ಗೂಢವೆಂಬುದು ದೃಶ್ಯ ದೃಶ್ಯವೆಂದರೆ ಶಕ್ತಿ. ಶಕ್ತಿ ಎಂದರೆ ಜೀವನ ದೃಷ್ಟವೆಂದರೆ ಜೀವದ ಸಾಕ್ಷಿ ಜೀವನಿಗೆ ಸಾಕ್ಷಿಯಂದರೆ ಶಿವತಾನೇ ಪರ ವಿಲ್ಲ. ದೃಶ್ಯ ದೃಷ್ಟ ಸಂಯೋಗ. ಶಿವಜೀವರೈಕ್ಯ, ಗುರುಏಕೋದೇವತಾ ನೆಂದು ಹೇಳಲ್ಪಟ್ಟಿತು. ದೃಶ್ಯವೇ ಶಕ್ತಿರೂಪು ದೃಷ್ಟವೇ ಶಿವನ ರೂಪು ರೂಪ ನಿರೂಪು ಐಕ್ಯ ಮೂರ್ತಿ ಗುರುತಾನೆ ಪರವಿಲ್ಲವೆಂದು ಹೇಳಲ್ಪಟ್ಟಿತು

ದ್ವೈತವು ವಿಲ್ಲ. ಅದ್ವೈತ ಸ್ವರೂಪ ನಿರ್ಮಾಣದ ಗೂಢ ದ್ವೈತವೆಂದರೆ ಶಿವಜೀವರೆಂಬುವದು ಅದ್ವೈತವೆಂದರೆ ಶಿವಜೀವರೊಂದೇ ಎಂದು ತಿಳಿವದು. ದ್ವೈತವು ನೀನಲ್ಲ ಅದ್ವೈತವು ನೀನಲ್ಲ, ಇದಕ್ಕೆ ಸಾಕ್ಷಿ ನೀನೇ ಇರುವಿ. ಗೂಢವೆಂದರೆ ದಾಸೋಹಂ ಜಂಗಮವೆಂದರೆ ಸೋಹಂ. ಸೋಹಂ ದಾಸೊ ಹವೇ ಐಕ್ಯವಂದೇ ಕಾಯಪ್ರಾಣ ನಾಥ ದಂತೆ ಚರ. ಪರ, ಸ್ವಯ ಚರ ವೆಂದರೆ ಜಂಗಮ ಪರವೆಂದರೆ ಲಿಂಗ ಸ್ವಯುವೆಂದರೆ ಭಕ್ತ. ತ್ರಿವಿಧ ವಂದಾ

ದ ಗುರು ಮೂರ್ತಿ ತಾನೆಂದು, ಹೇಳಲ್ಪಟ್ಟಿತು.

ಗುರು ದಾಸೋಹಂ ಸ್ವರೂಪು. ವಾಗಲಾಗಿಹನು. ಸೋಹಂವೇ ಜಂಗಮ ಪ್ರಾಣ ಸ್ವರೂಪಾರೂಢನು. ಗುರುಲಿಂಗ ಭಕ್ತ. ಜಂಗಮ ಚತುರ್ವಿಧ ಪ್ರಸಾದ ಗುರುನಾಮವೆಂದು ತಿಳಿ ಅರುವೇ ಗುರು. ಪ್ರಾಣವೆ ಲಿಂಗ ಜ್ಞಾನ ವೇ ಜಂಗಮ ಜೀವನೇ ಭಕ್ತ. ಈ ನಾಲ್ಕಕ್ಕೆ ಆಶ್ರಯ ಸ್ಥಾನವಾದದ್ದೆ ಘಟ ಇವರಿಗೆ ಮನಿಯಾದದ್ದೇ ನೇತ್ರ ಸ್ಥಾನ. ದಾಸೋಹಂ ವೆಂದರ ಜೀವನು. ಸೋಹಂವೆಂದರೆ ಶಿವನು. ಈ ಎರಡು ವಂದಾದದ್ದೇ ಗುರು ತಾನೇ ಲಿಂಗ ಜಂಗಮ. ಗುರು ಚರರೂಪು ಲಿಂಗವು. ಏಕಾತ್ಮ ಗುರು ನಾಮ ತಾನೇ ಎಂದು ಹೇಳಲ್ಪಟ್ಟಿತು. ಸೋಹಂ ತ್ರಿಗುಣ ವಾಗಿಹುದು ಸೋಹಂ ದಾಸೋಹಂ ಉಭಯ ಷಟು ಸ್ಥಲ ಏಕ ಮೂರ್ತಿ ಗುರು ತಾನೇ ಪರವಿಲ್ಲ ವೆಂದು ಹೇಳಲ್ಪಟ್ಟಿತು.

ಗುಕಾರವೇ ಭಕ್ತ. ರುಕಾರವೇ ಮಹೇಶ್ವರ, ಪ್ರಸಾದಿ ತ್ರಿಗುಣಾತ್ಮಕ ದಾಸೋಹಂ ವೆಂದು ಹೇಳಲ್ಪಟ್ಟಿತು. ರುಕಾರವೇ ಪ್ರಾಣಲಿಂಗ ಶರಣನೈಕ್ಯ ತ್ರಯ.ರೂಪವೇ ಸೋಹಂ ದಾಸೋಹಂ ಗುರುವೆಂದು ಹೇಳಲ್ಪಟ್ಟಿತು ಗು ಕಾರವು ಆಚಾರಲಿಂಗ ಗುರುಲಿಂಗ ಶಿವಲಿಂಗ ಈ ತ್ರಿವಿಧಕ್ಕೆ ಗೂಢ ದಾಸೋ ಹಂ ತಾನೆಂದು ಹೇಳಲ್ಪಟ್ಟಿತು. ರುಕಾರವೇ ಜಂಗಮ ಲಿಂಗ ಪ್ರಸಾದಲಿಂಗ ಮಹಾಲಿಂಗ ತ್ರಯ ಸೋಹಂ ಭಾವ ಅಂಗ ಲಿಂಗವೆಂಬ ಉಭಯ ವಂದಾದ ಗುರುತಾನೆಂದು ಹೇಳಲ್ಪಟ್ಟಿತು, ಸುಚಿತ್ತ ಸುಬುದ್ಧಿ ನಿರಹಂಕಾರ ಹಸ್ತ ತ್ರಯ ದಾಸೋಹಂ ಆತ್ಮನೆಂಬ ಲಿಂಗಸ್ಥಲವು ಆ ಲಿಂಗ ಗುರು ತಾನೆಂದು ಹೇಳುವದು. ಸುಮನ ಸುಜ್ಞಾನ ಸದ್ಭಾವವೆಂಬ ಇವೇ ಸೋಹಂ ಆ ಸೋ ಹಂವೇ ಲಿಂಗತತ್ವ ಸ್ವರೂಪವು. ಅಂಗತತ್ವ ಲಿಂಗತತ್ವ ವಂದಾದ್ದೇ ಗುರು ತಾನೆ ಎಂದು ಹೇಳಲ್ಪಟ್ಟಿತು.

ಅಂಗತತ್ವ ತ್ರಿವಿಧಮುಖ ಗೋಹಿ ರೂಪು. ಗುರು ತಾನೆ ಪರವಿಲ್ಲವೆಂದು ಹೇಳುವದು. ತ್ವಕ್ಕು, ಶ್ರೋತ್ರ, ಹೃದಯ, ಅಂಗತತ್ವವಾಗಿ ವೃತ್ತಿಸುತ್ತಿ ಹುದು.

ತ್ರಿವಿಧಮುಖ ಸೋಹಂ, ಸೋಹಂ ರೂಢಗುರುದೇವನೆಂದು ಹೇಳು

ವದು. ಸ್ಪರ್ಶ, ಶಬ್ದ, ಪರಿಣಾಮ ಲಿಂಗಾರೂಢವು. ಸೋಹಂ ವೆಂದು ಹೇಳುವದು. ದ್ರವ್ಯತ್ರಯ ಗುರು ತಾನೆಂದುದು. ಕರ್ಮಸಾದಾಖ್ಯವೇ ಶುದ್ಧ ಪ್ರಸಾದ. ಕರ್ತೃ ಸಾದಾಖ್ಯವೇ ಶಿದ್ಧ ಪ್ರಸಾದ. ಮೂರ್ತಿ ಸಾದಾಖ್ಯವೇ ಪ್ರಶಿದ್ಧ ಪ್ರಸಾದ. ಈ ತ್ರಿವಿಧ ಪ್ರಸಾದವೇ ಸೋಹಂ. ಆತ್ಮಾಂಗ ಗುಕಾರವೆ.ದು ಹೇಳುವದು ಮಹಾ ಪ್ರಸಾದವೇ ಮಹಾ ಮೂರ್ತಿ ಸಾದಾಖ್ಯ ನಿತ್ಯಪ್ರಸಾದವೇ ಶಿವಸಾದಾಖ್ಯ ಪರಂಜೋತಿ ಪ್ರಸಾದವೇ ಮಹಾ ಸಾದಾಖ್ಯ. ಆದು ಆರೂಢಸೋಹಂ. ಲಿಂಗತತ್ವಸೋಹಂ. ದಾಸೋಹ ವು ಉಭಯವು ವಂದಾದ ಗುರು ತಾನೆ ಎಂದು ಹೇಳುವದು. ನಿವೃತ್ತಿ ಕಲಿಯೇ ತಾರಕ ಬ್ರಹ್ಮ. ದಂಡಕ ಬ್ರಹ್ಮವೇ ಪ್ರತಿಷ್ಠ ಕಲಿಯ ಕುಂಡಲಾ ಬ್ರಹ್ಮ. ತ್ರಿಗುಣವೇ ದಾಸೋಹಂ. ಆತ್ಮಾಂಗ ಗುರುತಾನೆಂದು ಹೇಳುವದು. ಶಾಂತಿ ಕಲಿಯೇ ಅರ್ಧ ಚಂದ್ರಬ್ರಹ್ಮ. ಶೀತಕಲಿಯೆ ಬಿಂದು ಬ್ರಹ್ಮ ಪ್ರಣಮ ಓಂಕಾರಶಿಖರವಲ್ಲಿ ನಿರಂಜನ ಶಿಖಿಯೇ. ಚಿತ್ಕಲೇ ಸೋಹಂ ಗುರು ರೂಪು ಲಿಂಗ ತತ್ವ. ಪರಾತ್ಪರ ಗುರು ತಾನೆಂದು ಹೇಳುವದು.

ಬ್ರಹ್ಮ, ವಿಷ್ಣು, ರುದ್ರರು ಕೂಡಿತ್ರೈ ಮೂರ್ತಿ ಅಂಗತತ್ವ. ದಾಸೋಹಂ ತಾನೇ ಈಶ್ವರ ಸದಾಶಿವ, ಪರಶಿವ, ರೂಢಲಿಂಗ ಗುರು ತತ್ವ ತಾನೇ ಸೋಹಂ ವೆಂದ, ಹೇಳುವದು, ಕ್ರಿಯಾಶಕ್ತಿ ಈಚ್ಛಾ ಶಕ್ತಿ ಜ್ಞಾನಶಕ್ತಿ ಕೂಡಿ ವಂದಾದ ಆತ್ಮಾಂಗ ದಾಸೋಹಂ ತಾನೇ. ಆದಿಶಕ್ತಿ ಪರಶಕ್ತಿ, ಜ್ಞಾನಶಕ್ತಿ ಕೂಡಿ ವಂದಾದ ಆತ್ಮಾಂಗದಾಸೋಹಂ ತಾನೇ ಆದಿಶಕ್ತಿ ಪರಶಕ್ತಿ ಚಿಚ್ಛಕ್ತಿ ಲಿಂಗಾರೂಢ ಸೋಹಂಗುರುವೆಂದು ಹೇಳುವದು.

ಆಧಾರ ಚಕ್ರ ಸ್ವಾದಿಷ್ಠಾನ ಚಕ್ರ ಮಣಿಪೂರಕ ಚಕ್ರಗಳು ಆತ್ಮಾಂಗದಾಸೋಹಂ, ಅನಾಹತ, ವಿಶುದ್ಧಿ, ಅಗ್ನಿ, ಚಕ್ರಂಗಳು ಲಿಂಗಾರೂಢ ಸೋಹಂ ಭಾವ ಗುರು, ತಾನೆಂದು ಹೇಳು ವದು

ಆಧಾರಕ್ಕೆ ೧೩೦೦ ಜಪ, ಸ್ವಾಧಿಷ್ಠಾನಕ್ಕೆ ೨೫೦೦ ಜಪ, ಮಣಿಪೂರಕ್ಕೆ ೪೩೦೦ ಜಪ, ವಟ್ಟುತ್ರಿವಿಧ ಚಕ್ರಕ್ಕೆ ೮೬೦೦ ಜಪದಾಸೋಹಂ ಗೂಡಿ ಆತ್ಮಾಂಗವಾಗುವದು, ಅನಹತ ಚಕ್ರಕ್ಕೆ ೧೫೦೦ ಜಪ ವಿಶುದ್ಧಿಗೆ ೬೫೦೦ ಜಪ, ಅಗ್ನಿ ಚಕ್ರಕ್ಕೆ ೮೬೦೦ ವಟ್ಟು ಜಪ, ೯೨೫೦ ಬ್ರಹ್ಮರಂಧ್ರ ಜಪ ವರ್ತಿ

ಸುತ್ತಿಹುದು. ೭೨೦ ಈ ನಾಲ್ಕು ಚಕ್ರಗಳಲ್ಲಿ ಮೇಳೈಸಿದ ಜಪ ೧೬೬೪೨
ನಡೆಯುವವು. ಅದು ಲಿಂಗಾರೂಢ ಸೋಹಂ. ದಾಸೋಹಂ ನೊಡಗೂಡಿ
ದರೆ ೨೧೬೦೦ ಜಪವು ಲಿಂಗಾರೂಢವು ಮಂತ್ರ ಮೂರ್ತಿ ತಾನೆ ಯಂತ್ರ
ಮೂರ್ತಿ ತಾನೆಂದು ತಿಳಿವದು.

ಹಳದಿ,ಬಿಳಪು,ಕೆಂಪು ಮೂರು ಬಣ್ಣಗಳು ವಂದಾದದ್ದೆ ದಾಸೋಹಂ
ಇದು ಆತ್ಮಾಂಗ ಹಸರು ವರ್ಣ, ನೀಲ ವರ್ಣ, ಆಗ್ನಿಗೆ ಮಹಾವರ್ಣವು,
ಇದು ಗುರುತಾನೆಂದು ಹೇಳುವದು.

ವಾಚ್ಯದಿಂದ ನುಡಿಯುವದೇ ವಾಚಕಜಪ. ತನ್ನಕಿವಿಗೆ ಕೇಳುವಂತೆ
ತುಟಿ ಮಿಸುಕು ಮಾಡುವದೇ ಉಪಾಂಶಿಕ ಜಪ ರೋಹಣಾರೋಹಣದಿಂದ
ಮನಸ್ಸಿನಿಂದ ಮಾಡುವದೇ ಮಾನಸಿಕ ವೆನಿಸುವದು ಅನು ಸಂಧಾನ ತುರ್ಯ
ಜಪ, ವುನ್ಮನೀ ಸುಖ ಜಪ, ದೃಷ್ಟಿ, ಮನಪವನ ಕೂಡಿದ್ದೇ ಸಾಹಿತ್ಯ
ನಿಮಗ್ನ ಜಪ.

ಹಂಸೋ ಸೋಹಂ ನಿಸ್ಸಂಗವಾದ ಜಪ ಇದು ಆಜಪ ಜಪ ವಿಂತು
ಷಡಾಕ್ಷರ ಜಪವ ನೊಳಕೊಂಡ ಗುರು ತಾನೇ ಎಂದು ಹೇಳುವದು ಇದಕ್ಕೆ
ರೋಹಣಾರೋಹಣ ಜಪವೆನ್ನುತ್ತಾರೆ ಆ ವ್ಯಾಖ್ಯದಲ್ಲಿ ಆವಲಿಂಗದ ಜಪ
ನಡಿಯುತ್ತದೆಯೋ ಅಷ್ಟೇ ಜಪವನ್ನು ಮಾಡಿ ಆ ಲಿಂಗದ ಪ್ರಕಾಶದಲ್ಲಿ
ಗೂಡಿ ಆ ಲಿಂಗದ ನಾದದಲ್ಲಿ ಮನಪ್ನವಾಗಬೇಕಾದರೆ ಇದಕ್ಕೆ ಉದಯ
ಕಾಲ ಗಾತ್ರಿ ಎನ್ನುತ್ತಾರೆ. ಮತ್ತು ಮಧ್ಯಾನ್ಹಕಾಲ ಗಾತ್ರಿ ಸಾಯಂಕಾಲ
ಗಾತ್ರಿ ಬೇರೆ ಬೇರೆ ಇರುವವು, ಇದನ್ನು ಗುರು ಮುಖದಿಂದ ತಿಳಿದು ಆಚರಿಸ
ಬೇಕು. ಸ್ಮೃತಿಗಳಿಂದಲೂ, ವೇದಗಳಿಂದಲೂ, ಮಂತ್ರಗಳಿಂದಲೂ, ವಚನ
ಗಳಿಂದಲೂ, ಗುರುನಾಮ ಸ್ಮರಿಸಿ ಕೀರ್ತಿಸಿ,ಗುಣ ನಾಮವನ್ನು ಉಚ್ಚರಿಸು
ವದೇ ವಾಚಕ ಜಪವೆಂದು ಹೇಳುವದು.

ಅಂಬರಾಶಿ ವ ತೇಜೋಪುಂಜವಾದ ಪೀಠದಮೇಲೆ, ವಿದ್ಯಾಜ್ಯೋತಿ
ಅನಂತಕೋಟಿ ಬೆಳ್ಳಿಮಿಂಚಿನ ರಸದ ಕೆಡದೆರಗಿ ಕುರುವಿಟ್ಟು, ಸಂಭಾ
ರೂಢಂ ಗುರು ಮೂರ್ತಿಗೊಳಿಸಿ,ಸಮರ್ಚಿಸುವದೇ ಮಾನಸಿಕ ಜಪವೆಂದು
ತಿಳಿ. ಲಿಂಗಭೋಗೋಪ ಭೋಗಿಯಾಗಿ ಲಿಂಗ ಪ್ರಾಣ ಪ್ರಾಣಲಿಂಗಿ

ಯಾಗಿ ಅಂಗಾನು ಸಂಧಾನದಯೋಗ್ಯ ಅವಸ್ಥೆಯ ಜಪಅಸು ಸರಿಧ್ಯಾಸ ತೆರೆಯೆ ಜಪವು, ಗುಣದಾಸೋಹಂ ಆತ್ಮಂಗೆನೆಂದು ಹೇಳುವದು, ಇದಕ್ಕೆಉಪಾಂಶಕ ಜಪವೆಂದು ಹೇಳುವದು.

ಮನದಿಂದ ಮನವೇ ಲಕ್ಷಿಸುತ್ತಿಹುದು ಹ್ಯಾಗೆ ಲಕ್ಷ, ಹಾಗೆ ಮನ ಚಕ್ಷು ಮನವಂದೆ ಯಾದುದೇ ಉನ್ಮನಿ ಜಪವೆಂದು ತಿಳಿವದು. ಚಂದ್ರ ಸೂರ್ಯ, ಸುಷುಮ್ನ ದ್ವಾರ ಮಧ್ಯಸ್ಥಾನದಲ್ಲಿ ನಿಲ್ಲಲು ಅಂದರೆ ಭ್ರೂಮಧ್ಯ ಸ್ಥಾನ ಮನಪವನ ದೃಷ್ಟಿ ಸಾಹಿತ್ಯವಾಗಿ ಮನ ಮಗ್ನನಾಗಿಹುದೆ, ಮನ ಪವನ ಸಾಹಿತ್ಯ, ದೃಷ್ಟಿ ನಿಮಗ್ನ ಜಪಾರೂಢಾಚಾರ್ಯನೇ ಗುರುಎಂದು ಹೇಳುವದು, ಅಷ್ಟದಳದ ಮೇಲಾದುದ ಹಂಸನ ಮಧ್ಯದಳದಲ್ಲಿ ನಿಲ್ಲಿಸಿ, ಹಂಸ ನಾನೇ ನೀನು ಸೋಹಂ ನೀನೇ ನಾನು ನಾನು ನೀನೆಂಬು ಭಯವಳಿದು ಶಿವಜೀವರೈಕ್ಯವಾಗಿ ಅನೇಕಲ್ಲು ನೀರೊಳಗೆ ಬೆರದಂತೆ ಉಭಯುವೆಂದರಿಯದಿಹುದೇ ಅಜಪ ವೆನಿಸುವದು ಆಚಾರ್ಯ ಪೂರ್ಣ ಗುರುವೆಂದು ಹೇಳುವದು ಅಜಪಯೋಗವೆನಬೇಕು ಇದಕ್ಕೆ ಶಿವಯೋಗವೆನಬೇಕು. ಇದಕ್ಕೆ ಐಕ್ಯ ಸ್ಥಲವೆನಬೇಕು ಸತಿ ಉನ್ಮನಿಹುದೆ ನಿಜವಾದ ಯೋಗವೆನಬೇಕು ಹೀಗೆ ಮೌನಾವಸ್ಥೆ ತಾನೆಯಾಗುವದು ತಾವಾಗಿ ಮಾತಾಡುವದನ್ನು ಬಿಟ್ಟರೆ ಮೌನಾವಸ್ಥೆಯಾಗುವದೇ.

ಇದಕ್ಕೆ ಆರೂಢ ಸ್ಥಲಆಗುವದು ಮುಂದೆಮೈಮರದು ನಿದ್ರಿಸುತಿರುವ ದೇಹಪರಮಾರೂಢ ಮಾರ್ಗವೆಂದು ಹೇಳುವದು ತಾನೇ ಬೋಧ್ಯ ತಾನೇ ಬೋಧಕಾಚಾರ್ಯತನ್ನ ತಾನೇಬೋಧಿಸಿಕೊಳ್ಳುತ್ತಿದ್ದಾತ ತಾನೇಗುರುವೆಂದು ಹೇಳುವದು ಈ ಅವಸ್ಥೆಯಾದರೂ ಪರಮಾರೂಢ ಮಾರ್ಗಾವಸ್ಥೆಯಾಗುವದು ಬಾಲ ಉನ್ಮತ್ತ ಪಿಶಾಚಿ, ಮೌನಾವಸ್ಥೆ ಯಾಗುವದು ಮತ್ತು ಕುರುಡ ಕಿವಡ ಮೂಕ ಹುಚ್ಚ ಈ ನಾಲ್ಕು ಅವಸ್ಥೆಯಾಗುವದು ಜ್ಞಾನಬಲದಿಂದ ಈ ನಾಲ್ಕು ಅವಸ್ಥೆಯನ್ನು ಹೊಂದುವರು, ಅಷ್ಟಮದಿಂದಕೂಡಿದ ಶ್ರೀಮಂತರುಗಳಲ್ಲಿ ಈ ನಾಲ್ಕು ಅವಸ್ಥೆಗಳನ್ನು ಹೊಂದುವರು, ಇದು ಅಜ್ಞಾನದಿಂದಾಗುವದು,

ಇನ್ನು ಮುದ್ರಾಲಕ್ಷಣವನ್ನು ಹೇಳುವೆವು, ಮತ್ತು ಶ್ಯಾಂಭವಿ ಷಣ್ಮು

ಖಿ ಸಾಂಖ್ಯಿತಾರಕ ಅನುನಷ್ಕ ಮುದ್ರೆಗಳು ಇವು ಪ್ರಯತ್ನದಿಂದ ಸಾಧಿಸ ಬೇಕು, ಸುಮ್ಮನೇ ಸಾಧ್ಯವಾಗಲರಿಯದು ಶಿದ್ಧಿಯಾಗಲರಿಯದು, ಗುರು ಮುಖದಿಂದ ತಿಳಿಯಬೇಕು, ವಿಶ್ವಾಸವಿಡಿದು ಭೂಚರಿಎಂಬ ನಾಮವು ಅದು ನಾಶಿಕಾಗ್ರದ ಸ್ಥಾನದಲ್ಲಿರುವದೆಂದು ಇದೇ ಅಧೋದೃಷ್ಟಿಯ ೨.

ಪ್ರಾಣವಾಯುವೆ ದಕ್ಷಿಣ ನಾಡಿ ಅಪಾನವಾಯುವೇ ವಾಮನಾಡಿ ಸೂರ್ಯನಾಡಿಗೆ ಹನ್ನೆರಡು ಕಳೆಎಂಬ ೧೨ ಅಕ್ಷರ ಅಪಾನವಾಯುವೇ ವಾಮನಾಡಿ ೧೬ ಕಳೆ ೧೨ ಕಳೆ ಕೂಡಿ ಚಂದ್ರ ಸೂರ್ಯ ಸಮಾನ ಮಾಡಿ ದರೆ ಸುಷುಮ್ನಕ್ಕೆ ಹಾಕಿ ೨೮ ಅಕ್ಷರದಿಂದ ಜಪಿಸಿ ಭ್ರೂಮಧ್ಯಕ್ಕೆ ಲಕ್ಷವಿಟ್ಟು ನಿರಾಮಯದಲ್ಲಿ ಅಂದರೆ ತನ್ನ ಸ್ವರೂಪದಲ್ಲಿ ಮನ ಮಗ್ನವಾಗಿ ಶ್ವೇತ ಪೀತ ರಕ್ತ ಮಾಂಜಿಷ್ಠ ಹರಿತ ಕಪೋತವೆಂಬ ಷಡುವರ್ಣದ ಮಾಯಕ್ಕೆ ಹೊಂ ದದೇ ನಿರ್ಮಾಯ ನಿರ್ಜಲ ನಿರ್ಮಲವಾದ ವಸ್ತು ಸಹಚರಿ ದೃಷ್ಟಿಎಂದರೆ ಉಭಯ ಚಕ್ಷುವಂದಾಗಿ ನೇತ್ರ ತಿರುಗಿಸಿ ಅಂತರದಲ್ಲಿ ಲೀನಮಾಡುವದು ಇದರಿಂದ ಪರಮ ಪದವೆಂದು ಹೇಳಲ್ಪಟ್ಟಿತು.

ದೃಷ್ಟಿ ಪೂರ್ಣಬೆಳೆದು ಯಲಿ ಮಹಾತ್ಮಂಗನೇ ಸಹಚರಿ ದೃಷ್ಟಿಎಂದರೆ ಕೇಳು, ಭ್ರೂವಂಗೆ ಬ್ರೂಮಧ್ಯದ್ವಿದಳದಲ್ಲಿ ಲಕ್ಷಿಸಿ ಬ್ರಹ್ಮ ರಂಧ್ರದಲ್ಲಿ ಅವಸ್ಥಿ ವಿರಬೇಕೆಂದು ಹೇಳುವದು. ಸುಷುಮ್ನನಾಳಮಧ್ಯದಲ್ಲಿ ಲಕ್ಷವಿಟ್ಟು. ಜ್ಞಾನ ಜೋತಿಯ ಸಾಹಿತ್ಯವಾದ ಸಾಧಕನು. ಯಲಿ ಪರಮ ಜ್ಞಾನ ಶಕ್ತಿಯೆ ಖೇಚರಿಯ ಮುದ್ರಿಯನ್ನು ದಿನೇ ದಿನೇ ಯಾವಾಗಲು ಲಕ್ಷಿಸುತ್ತಿಹುದೆಂದು ಹೇಳುವನೆಂದು ಹೇಳುವದು. ಇದು ಅಂತರಂಗದ ಲಕ್ಷವು, ಬಹಿರ್ಗತವನ್ನು ತಾವು ತ್ಯಾಗವ ಮಾಡಿ ಸುಧಾಮೃತವನ್ನು ಪಾನಮಾಡುತಿಹುದು. ಪ್ರಣ ವಂದ ಅಗ್ರ ಅರ್ಧಾ ಶಿಂಹಾಸನಾರೂಢನಾಗಿ ರಾಜಂಗ್ಯೆಯುತ್ತ ಆ ಲಕ್ಷವೇ ಲಕ್ಷವಾಗಿಹುದುಜ್ಞಾನಿಗಳುಲಕ್ಷಿಸುತ್ತಿ ಹುದು. ಇದಕ್ಕೆ ಖೇಚರಿಯನಾಮ ತಾನೇ ಸರ್ವ ಕಾಮ ಫಲ ಪ್ರದಾಯಕವೆಂದು ಹೇಳುವದು. ಆ ಮನವನ್ನು ಸುಮನವೆಂಬದರ್ಪಣದಿಂದ ನೋಡಲು ತೋರುವ ಗ್ರಂಥಿ ಹುಸಿಯಾಯಿತ್ತು ಸ್ವಯಾನಂದ ಭೋಗ್ಯ ಮುದ್ರಿಗಳಿಗೆ ವಶಿಷ್ಠವಾಗಿಹನು. ಮನವು ಉನ್ಮನಿ ಮಿಸುಕದ ಬೆಳಗಿನೊಳಗೆಓಲ್ಯಾಡುತಿಹನು. ಎಂದು ಹೇಳುವದುಸಾಧನ

ಸಾಧಿಸುವಂಥ ಯೋಗೀಶ್ವರರಿಗೆ ತತ್ವಮಸಿ ಮಹಾ ವಾಕ್ಯದಿಂದ ಪಿಂಡ ಬ್ರಹ್ಮಾಂಡವ ಕಳೆದುಳಿದ ಉಳುವೆಯು ಗುರು ಮೂರ್ತಿತಾನೆ ಪರಾತ್ಪರ ಪರವಸ್ತುಎಂದು ಹೇಳುವದು ಬೆಳ್ಳಿಪರ್ವತವೆಂದರೆ ಬ್ರಹ್ಮರಂದ್ರ ಇದರಲ್ಲಿ ಲಕ್ಷವಿಟ್ಟು ನೋಡಲು ಸಕಲ ಪ್ರಮಥ ಗಣಂಗಳು ತೋರುವರು ಇದು ಊರ್ಧ್ವ ದೃಷ್ಟಿಯಿಂದಾಗುವದು. ಆಸನಬಂಧನ ಜಾಳಿಂಧರಬಂಧನ ಗುರು ಬಂಧನ, ನಾಲ್ಕುಬಂಧನಗಳು. ಬಸವಮುದ್ರಿ ಖೇಚರಿಮುದ್ರಿ ಶಾಂಭವಿ ಮುದ್ರಿ ಷಣ್ಮುಖಿಮುದ್ರಿ ಖೇಚರಿಮುದ್ರಿ, ಭೂಚರಿಮುದ್ರಿ, ಸಹಚರಿಮುದ್ರಿ, ಅಗೋಚರ ಮುದ್ರಿ ಉನ್ಮನಿಮುದ್ರಿ. ಗುರುಮುದ್ರಿಯನರಿದು ರೇಚಕಪವನ, ಪೂರಕಪವನ, ಕುಂಭಕಪವನ, ಇಂತು ನಾಲ್ಕು ಪವನಂಗಳು. ಇಂತಾಲಕ್ಷಣವನ್ನರಿದಾತನೇ ಗುರು ಇಂಥಾ ಗುರುವಿನ ಪ್ರಸಾದವನ್ನು ಸ್ವೀಕರಿಸಿದಾತನೇ ಭಕ್ತ, ಶಕ್ತ ವಿರಕ್ತ, ಮುಕ್ತಎಂಬ ಸಾಮ್ರಾಜ್ಯಕ್ಕೆ ಒಡೆಯನಾದವನು ಯೋಗದಲ್ಲಿ ಸಂಪನ್ನನಾದ ಗುರುವೇ ಪರಾತ್ಪರ ದೈವ ಯೋಗವೆಂದ ಜೀವಶಿವರೈಕ್ಯವನರಿದಾತನೇ, ಗುರು ದೇಹ ನಿರ್ಬಯಲನಾಗಿ ತೋರಬಲ್ಲರೇ ಗುರುವೆಂದು ಹೇಳುವರು.

ಸೂರ್ಯನಾಡಿಯಲ್ಲಿ ೧೨ ಅಪಾನವಾಯುವಿನಲ್ಲಿ ೧೬ ಇವೇ ಕೂಡಿದರೆ ೨೮ ಆಗುವದು. ೧೪ ಅಕ್ಷರಂಗಳು ಚಕ್ರದಲ್ಲಿ ಕಳೆದು ಪೂರಕದಲ್ಲಿ ಹದಿನಾಲು ತುಂಬಿ ಈ ಉಭಯವು ನಾಡಿವಂದುಗೂಡಿ ಪ್ರಾಣಾಯಾಮವನ್ನು ಮಾಡುವದು ಈಡೆ ಪಿಂಗಳೆ, ಹಸ್ತಿ, ಜಿಂಹೆ, ಪೂಂಶಿನಿ, ಪಯಶ್ವಿನಿ ಈ ಆರು ನಾಡಿಗಳನ್ನರಿದಾತನೇ ಗುರುಎಂದು ಹೇಳುವದು.

ಷಣ್ಮುದ್ರಿ ಷಡಾಂಗುಲದಿಂದ ಷಡಂಗನ್ಯಾಸವನ್ನಾಚರಿಸ ಬಲ್ಲರೆ, ಷಡ್ದರ್ಶನ, ಸ್ಥಾಪನಾಚಾರ್ಯ ಗುರುವೆಂದು ಹೇಳುವದು. ದ್ವಯ ಕರ್ಣ ಸ್ವಯಂಗುಷ್ಟವ ನೋಡಿ ದ್ವಿಚಕ್ಷುವಿನಲ್ಲಿ ಉಭಯ ತರ್ಜನಿಟ್ಟು ಚಂದ್ರ ಸೂರ್ಯರಲ್ಲಿ ಮಧ್ಯಂಗುಲವನಿಟ್ಟು ನೊತ್ತಿ ಷಣ್ಮುಖಿಎಂಬ ಮುದ್ರೆಯನ್ನು ಧಾರಣ ಮಾಡಬಲ್ಲರೆ ಗುರುವೆನಬೇಕು. ಗುರುನಾಮವನ್ನು ಜಿಂಹೆಯಿಂದ ಸ್ತುತಿಸುವದೆಂದು ಹೇಳುವದು. ಚಿದಾಬ್ಧಿಯೊಳು ಮುಳುಗಿ ಕಂಪಿಸುತ, ಪುಳಕಾಶ್ರುಯಂಗಳ ನೆಗದು ಬೆಮರೊಗೆದು ಮೂರ್ಛಿತವಾಗಿ ಕರ್ಪುರ

ಜ್ಯೋತಿ ಸಂಯೋಗವಾಗಿ ತನ್ನ ತಾ ಮರೆದು ಗುರುರಾಯಂತನ್ನ ಮಸ್ತಕ ದೊಳಿರಲು ಎಚ್ಚತ್ತು ಕಣ್ದೆರದನೆಂದು ಹೇಳುವದು. ಹರ ಹರ: ಶಿವತ್ರಾಹಿ ತ್ರಾಹಿ. ಜಯ, ಜಯ, ಜಯ ಅನಾಥ ಬಂಧುವೇ ಮದ್ಗುರುನಾಥ ಶ್ರೀಜ ಗದ್ಗುರುವೇ ನಮಸ್ತೆ. ನಮಸ್ತೆಎಂದು ಗುರುಪಾದಾಂಬುಜಕ್ಕೆ ಪೊಡಮೊ ಟ್ಟನೆಂದು ಹೇಳುವದು.

ಬ್ರಹ್ಮಾದಿ ದೇವತೆಗಳಾದ, ಸರ್ವರಿಗೆ ದೇವಾದಿ. ದೇವರುಗಳಿಗೆ ಮುದ್ರಾಪತಿಎಂದು ಹೇಳುವದು. ಅಷ್ಟಾಂಗಯೋಗ, ಹಠಯೋಗ, ಲಂಬಿ ಕಾಯೋಗ, ರಾಜಯೋಗ, ರಾಜಸಾಧನಯೋಗ ಇಷ್ಟಲಿಂಗಯೋಗ, ಶಿವ ಯೋಗ, ವೀರಶೈವಾಚಾರ್ಯ ಷಟ್‌ಸ್ಥಲಯೋಗ ಸಂಪನ್ನರಾದ ಯೋಗಾ ದಿಯೋಗಿಗಳೇ ಮುಕ್ತಿ ಮುದ್ರಾದಿಪತಿಯ ಷಣ್ಮುದ್ರಿಯಿಂದ ಮತ್ತೊಂದು ಮುದ್ರಿ ಇಲ್ಲೆಂದು ಹೇಳುವದು. ತತ್ವಮಶ್ಯಾದಿ ವಾಕ್ಯಗಳಿಗಿಂತಲೂ ಮತ್ತೊಂ ದು ಬೋಧೆ ಇಲ್ಲವು ವೀರಶೈವಾಚಾರದಿಂದ ಮತ್ತೊಂದು ಆಚಾರವಿಲ್ಲ. ನಾದ ಮುದ್ರಿಗಿಂತಲೂ ಮತ್ತೊಂದು ಮುದ್ರೆ ಇಲ್ಲವು. ಗುರುದೇವರಕಿಂತಲೂ ಮತ್ತೊಂದು ದೇವರಿಲ್ಲವೆಂದು ಹೇಳುವದು. ನಾದ ಮುದ್ರಿಯಿಂದ ಪರ ಮತ್ತೊಂದು ಮೋಕ್ಷವಿಲ್ಲ ಗುರು ಕೃಪೆಗಿಂತಲೂ ಮತ್ತೊಂದು ಕೃಪೆಇಲ್ಲ ಷಡಾಕ್ಷರ ಮಂತ್ರಗಿಂತಲೂ ಮತ್ತೊಂದು ಮಂತ್ರವಿಲ್ಲ. ಗುರು ನಾಮಕ್ಕಿಂ ತಲೂ ಮತ್ತೊಂದು ನಾಮವಿಲ್ಲವೆಂದು ತಿಳಿಯುವದು.

ತತ್ಪದವೇ ಲಿಂಗಾಂಗ ಲಿಂಗಾಂಗವೇ ಬ್ರಹ್ಮಾಂಡ ಪಿಂಡ ಬ್ರಹ್ಮಾಂಡ ಯೋರೈಕ್ಯವೇ ಗುರುನಾಮಾಮೃತಮಾರ್ಗವೆಂದು ಹೇಳುವದು. ಸ್ವಯಂ ನಿರ್ಮಲ ಆಕಾಶದೊಳಗೆ ಪರಿಪೂರ್ಣವಾಗಿ ಯೋಮಕೇಶನು ತಾನೇ ನೇತ್ರ. ದಲ್ಲಿ ಶಿವಲಿಂಗವು ತಾನೇ ಹೊಳಿಯುವದು. ಆಲಿಂಗವೇ ನೀನೆಂದು ಹೇಳುವದು.

ತತ್ವದ ತ್ವಂಪದ ಅಶಿಪದವೆಂಬ ಪದತ್ರಯಕ್ಕೆ ಅತೀತಲಿಂಗವು ಸತ್ತು ನಾಧ ಚಿತ್ತು ಬಿಂದು ಆನಂದವೇ ಕಳೆ ಅತೀತ ಭಕ್ತಿ ಜ್ಞಾನ ವೈರಾಗ್ಯಕ್ಕೆ ತಾನೇ ಕಾರಣವಾಗಿಹದು. ಅವಿರಳ ಶಿವಲಿಂಗವೆಂದು ಹೇಳುವದು ಹರಿವರಿ ಹರಿಯದು ನೆನದು ಕಪ್ಪಿಯಾಗದು. ಶಸ್ತ್ರಂಗಳಿಂದ ಕಡಿದರೂ ಕಡಿಯದು

ಅಗ್ನಿಯಿಂದ ಸುಟ್ಟರೂ ಸುಡದು. ವಾಯುವಿನಿಂದ ಚಲಿಸದು. ಶಿವಲಿಂಗ ತಾನೆಂದು ಹೇಳುವದು. ನೇಮ ಶೀಮಿಗಳಿಗೆ ಶಿಲ್ಪದು. ಶಿದ್ಧ ಗಂಧರ್ವರ ಹೃದಯ ಕಮಲ ಮಧ್ಯದಲ್ಲಿ ಬೆಳಗುತಿಹ ಜ್ಯೋತಿ ಪೂರ್ಣ ಜ್ಯೋತಿ ಶಿವಲಿಂಗವೆಂದು ಹೇಳುವದು

ಆದಿಶಕ್ತಿಎಂದರೆ ಲಿಂಗದ ಪೀಠ ಇಚ್ಛಾಶಕ್ತಿಎಂದರೆ ಲಿಂಗದ ಗೋಮುಖ ಲಿಂಗದ ಗೋಮುಖವೆಂದರೆ ದೆಶೆದಿಶೋಕ್ಕಲೆ ಹತ್ತುಕಳೆಯ ವಿದ್ಯಾಜ್ಯೋತಿಯುಲಿಂಗ ಧಗ ಧಗಿಸುತ್ತಿಹುದು. ಹಕಾರ ಪ್ರತಿಷ್ಠಕಳೆ. ಪ್ರತಿಷ್ಠ ಕಲೆ ಎಂದರೆ ಜ್ಞಾನಶಕ್ತಿ ಜ್ಞಾನಶಕ್ತಿಎಂದರೆ ಲಿಂಗದ ಜಲಹರಿ ಊರ್ಧ್ವರೇತೊತೇಜೋಮಯದ ಸಪ್ತ ಶಕ್ತಿಯರ ಸಪ್ತ ಬೀಜ ನವರಸವೆಂದು ಹೇಳುವದು. ಇನ್ನು ಳಕಾರ ನಿವೃತ್ತಿ ಕಲೆಎನಿಸುವದು ನಿವೃತ್ತಿ ಕಲೆಎಂದರೆ ಲಿಂಗದ ದೆಶೆ ಪ್ರಾಣ ಕ್ರಿಯಾ ಪ್ರತಿಷ್ಠ ಶಿವಲಿಂಗ ಕಾರಣ ತನುವೆಂದು ಹೇಳುವದು. ಕಲೆ ಶಕ್ತಿ. ಲಿಂಗ. ಓಂಕಾರ ಪೀಠಿಕೆ. ಈ ಐದು ಬೀಜ ಕೂಡಿದರೆ ನಾದ, ಬಿಂದು, ಕಳೆ ರಸ ರೂಪು ಈ ಐದು ಪ್ರಣವಾದ ಬೀಜ ಮೂರ್ತಿಗಳು. ಹುಟ್ಟಿದವು. ಇನ್ನು ನಾದ ಗರ್ಭದಲ್ಲಿ ಜ್ಞಾನ ಜ್ಯೋತಿಹುಟ್ಟಿತು ಬಿಂದುವಿನ ಗರ್ಭದಲ್ಲಿ ವೀರ್ಯಶುಕ್ಲ ವೀರ್ಯದ ಗರ್ಭದಲ್ಲಿ ಪಿಂಡಾಂಡಾಂಕುರ. ಇದರ ಗರ್ಭದಲ್ಲಿ ಮಾಂಸ ರೇತಸ್ಸುಮೇದನಿಯ ಗರ್ಭದಲ್ಲಿ ಅಸ್ಥಿ ನಾಡಿ ರೋಮ ಇನ್ನು ಕಳೆಕಳೆಯ ಗರ್ಭದಲ್ಲಿ ಸ್ವರೂಪು ಇದರ ಗರ್ಭದಲ್ಲಿ ಅನುಭಾವಗೋಷ್ಠಿ ಪ್ರಸಂಗದ ಅನುಭಾವದ ಗರ್ಭದಲ್ಲಿ ಅಂತರಾತ್ಮ ಮೊದಲಾದವರು ಹುಟ್ಟಿದರು ಇನ್ನು ಮನದ ಕೊನೆಯ ಮೇಲಣ ಲಿಂಗದ ಓಂಕಾರ ಪ್ರಜ್ವಲಿಸುತ್ತಿಹುದು ಇನ್ನು ರಸ ಇದರ ಗರ್ಭದಲ್ಲಿ ರುಧಿರ ಇದರ ಗರ್ಭದಲ್ಲಿ ತ್ವಕ್ಕು, ಇದರ ಗರ್ಭದಲ್ಲಿ ಪಿಂಡಾಂಡ, ಇದರ ಗರ್ಭದಲ್ಲಿ ವಂಕನಾಳ, ಇದರ ಗರ್ಭದಲ್ಲಿ ಈಡಾ ಪಿಂಗಳ ಸುಷುಮ್ನ, ಗಾಂಧಾರಿ, ಹಸ್ತಿ, ಜಿಂಹೆ, ಪುಷೆಪಯಶ್ವಿನಿ, ಅಲಂಬು ಕುಹೆ ಶಂಖಿನಿ ಮೊದಲಾದ ಮುಖ್ಯನಾಡಿಗಳು. ಈ ಹನ್ನೊಂದು ನಾಡಿಗಳೊಳಗೆ ಎಪ್ಪತ್ತೆರಡುಸಾವಿರ ನಾಡಿಗಳು, ಈ ನಾಡಿಗಳಲ್ಲಿ ಅತಿ ಸೂಕ್ಷ್ಮನಾಡಿಗಳು ಮೂರುವರೆ ಕೋಟಿ ನಾಡಿಗಳು ಉತ್ಪತ್ಯವೆಂದು ತಿಳಿ.

ಶಿವ-ಶಕ್ತಿಗಳಿಗೋ ವೃಷಭಗಳಾದವು. ಗಾಯತ್ರಿ ತಾವೇ ಪ್ರಸಾದ ಸ್ವರೂಪವಾದ ಶಿವ-ಶಕ್ತಿ ವಂದೇ ಬಸವ ರೂಪವಾಯ್ತು. ಪ್ರಸಾದ ಬಸವನುಕೂಡಿ ವಂದೇ ಶಿವ ರೂಪಾಯ್ತು. ಎಂದು ತಿಳಿವದು.

ಸ್ವಯಂ ಶಕ್ತಿ ಗಾಯತ್ರಿಯಾದೊಳು ಶಿವ ತಾನೇ ಬಸವನಾದನೆಂದು ಹೇಳಿದನು. ಬಸವನೇ ವಂದು, ಪ್ರಸಾದವಂದೇ ಬೀಜ ವಂದೇ ರೂಪು. ಆ ಬೀಜದಿಂದ ಶಿವ-ಶಕ್ತಿಗಳೆಂಬ ಎರಡು ಶಾಖೆಗಳಾದವು. ವೃಷಭ ರೂಪಿಣಿ ಎಂಬ ಉಭಯಃ ಶಿವಶಕ್ತಿಗಳಾದವು ಆ ವೃಷಭ ರೂಪಿಣಿ ವಂದೇ ಏಕ ಪ್ರಸಾದ ತಾನೇಯಾಗಿದ್ದೀತು. ಎಂದು ಹೇಳಲ್ಪಟ್ಟಿತು. ಬಸವನೇ ಬಂಧು ಬಳಗ ಕುಲಗೋತ್ರ ವರ್ಣ ಆಶ್ರಮ ಬಸವನೇ ದೀಕ್ಷಾಗುರು ಶಿಕ್ಷಾ ಗುರು ಮೋಕ್ಷಾ ಗುರು, ಗುರುವಿನ ಗುರು, ಪರಮ ಗುರು, ಪರಮಾರಾಧ್ಯ ತಾನೇಯಾದ ಬಸವ ಕುಲದೈವ- ಮನದೈವ ಪ್ರಾಣ ದೈವ. ಇಷ್ಟದೈವ ಬಸವ ತಾನೇ ಸರ್ವ ದೇವರಿಗೆ ದೇವನಾದನು ಗಾಯತ್ರಿ ತಾನೇ ಮಂತ್ರಮೂರ್ತಿ ಪ್ರಣವ ಸ್ವರೂಪಿಣಿಎಂದು ಹೇಳುವದು. ರೂಕ್ಷಣಿ ಮೂರಕ್ಷರದಿಂದ ರೂ ಅಂದರೆ ಸೂರ್ಯ, ಸೆ ಎಂದರೆ ಚಂದ್ರ. ನಿ ಎಂದರೆ ಈಶ್ವರನ ಹಣೆಗಣ್ಣು ಅಗ್ನಿ ಇಂತಿ ಗಾಯತ್ರಿ ಎಂಬ ತ್ರಿ ಅಕ್ಷರ ಈಶ್ವರನ ತ್ರಿನೇತ್ರವಾಗಿಹವೆಂದು ಹೇಳುವದು.

ಸ ರಿ ಗ ಮ ಪ ದ ನಿ ಇನಿತು ಸಪ್ತ ಸ್ವರವನೊಳಕೊಂಡ, ಗಂಧರ್ವ ವೇದ, ಗರುಡ ಗಂಧರ್ವ, ಸಿದ್ಧ, ವಿದ್ಯಾಧರರು. ಇನಿತು ಗಂಧರ್ವ ವೇದವಾಗಿರುವದೆಂದು ತಿಳಿ.

ಬ್ರಹ್ಮ ಗೀತೆ ಭಗವದ್ಗೀತೆ, ರುದ್ರಗೀತೆ ವೃಷಭ ಗೀತೆ, ಉಮಾ ಗೀತೆ, ಕಲ್ಯಾಣಗೀತೆ ಗುರುಗೀತೆ ಈ ಗೀತೆಗಳೇ ಗಾಯತ್ರಿ ಕಂಠ, ಮಾಲೆಯಾಗಿ ಕಂಠದಲ್ಲಿ ಧರಿಸಿರುವಳು. ಇಪ್ಪತ್ತೆಂಟು ದಿವ್ಯಾಗಮವೇ ವೃಷ್ಟ ಚಿನ್ಹವಾಗಿರುವದು. ಭಾಗೀರಥಿ, ಜಾಹ್ನವಿ ಸರಸ್ವತಿ ಈ ಮೂರು ನದಿಗಳೇ ಗಾಯತ್ರಿ ಗುದ ಗುಹ್ಯ ಬಿಂದುನಾಳ ತ್ರಿವಿಧ ನಾಡಿಗಳಾದವು ಹೊರಗಿನ ಪದಾರ್ಥವ ಕೊಟ್ಟು ದೇವರಾದರಲ್ಲದೆ. ತಮ್ಮ ನಿತ್ಯ ದೇವರಾದವರಿಲ್ಲವೆಂದು ತಿಳಿವದು.

ತನ್ನನ್ನು ಕೊಡದೆ ಇದ್ದವನು ದೇವರಲ್ಲ. ತನ್ನನಿಕ್ಕಿದಾತ ಭಕ್ತನಲ್ಲ ವೆಂದು ತಿಳಿ. ಬಸವನು ಶಿವನು ವಂದೆ ಶಿವನು ಬಸವನೂ ವಂದೇ ಆತ್ಮ ಬಸವ ಶಿವನು ಏಕ ಪ್ರಾಣ ಶಿವನು ಬಸವನು ವಂದೇ ಸ್ಥಲ ಜ್ಯೋತಿ ಜ್ಯೋತಿ ಗೆಬೇಧವಿಲ್ಲ. ಹಾಂಗೆ ಶಿವನು ಬಸವನು ವಂದೆ. ಸತ್ತುಪೃಥ್ವಿ ಚಿತ್ತು, ಅಪು ಆನಂದವೇ ಅಗ್ನಿ, ನಿತ್ಯವೇ ವಾಯು ಆಕಾಶವೇ ಸಂಪೂರ್ಣವು. ಸತ್ತು ಭಕ್ತ. ಚಿತ್ತು ಮಹೇಶ್ವರ. ಆನಂದವೇ ಪ್ರಸಾದ. ನಿತ್ಯವೇ ಪ್ರಾಣಲಿಂಗಿ. ಪರಿಪೂರ್ಣ ಶರಣೈಕ್ಯರೆಂದು ತಿಳಿವದು. ಸತ್ತು ಆಚಾರಲಿಂಗ, ಚಿತ್ತು ಗುರು ಲಿಂಗ. ಆನಂದವೇ ಶಿವಲಿಂಗ ನಿತ್ಯವೇ ಜಂಗಮಲಿಂಗ, ಪರಿಪೂರ್ಣವೇ ಪ್ರಸಾದಲಿಂಗ.

ಸತ್ತು ಶಬ್ದ. ಚಿತ್ತು ಸ್ಪರ್ಶ ಆನಂದರೂಪು ನಿತ್ಯ ರಸ. ಪರಿಪೂರ್ಣ ವೇಗಂಧವಾಯಿತ್ತು. ಸತ್ತು ಶ್ರೋತ್ರ. ಚಿತ್ತು ತ್ವಕ್ಕು. ಆನಂದ ನೇತ್ರ. ನಿತ್ಯವೇ ಜಿಂಹೆ ಪರಿಪೂರ್ಣವೇ ಘ್ರಾಣವಾಯಿತ್ತು. ಇಂತಿ ಪರಿಣಾಮವೇ ಹೃದಯಮುಖವು. ಬಸವತಾನೆಂದು ತಿಳಿ ಸತ್ತು ಶುದ್ಧ ಪ್ರಸಾದ. ಚಿತ್ತು ಶಿದ್ಧ ಪ್ರಸಾದ ಆನಂದ ಪ್ರಶಿದ್ಧ ಪ್ರಸಾದ. ನಿತ್ಯ ಶೇಷ ಪ್ರಸಾದ. ಪರಿಪೂರ್ಣವೇ ಸೂಸ ಪ್ರಸಾದವೆಂದು ತಿಳಿವದು.

ಸತ್ತು. ಚಿತ್ತು. ಆನಂದ. ನಿತ್ಯ ಪರಿಪೂರ್ಣ. ಮಹಾ ಪ್ರಸಾದ ಬಸವ ತಾನೆಂದು ಹೇಳುವದು. ಸರ್ವ ದೇವಾದಿ ದೇವರಿಗೆ. ಮೂಲವಾವುದು. ಮೂಲಕ್ಕೆ ಅಂಕುರವಾವುದು. ಆ ಮೂಲಾಂಕುರಕ್ಕೆ ಬೀಜವಾವುದು. ಇನಿತು ದೇವಾದಿ ದೇವರ ಮೂಲಾಂಕುರಕ್ಕೆ ಬೀಜ ಬಸವೇಶ್ವರ ದೇವರು ತಾನೆಂದು ತಿಳಿಯಬೇಕು.

ಜಲವುಇಲ್ಲ. ಪೃಥ್ವಿ ಇಲ್ಲ, ಅಗ್ನಿ ಇಲ್ಲ, ವಾಯುವಿಲ್ಲ, ಕಾಶವಿಲ್ಲ, ಚಂದ್ರಾದಿ ಮೊದಲಾದ ನವಗ್ರಹಂಗಳಿಲ್ಲ. ಇಪ್ಪತ್ತೇಳು ನಕ್ಷತ್ರಂಗಳು ಇಲ್ಲ. ಬಸವೇಶ್ವರ ದೇವನೊಬ್ಬನೇ ದೇವರು ಮತ್ತಾವ ದೇವರಿಲ್ಲವೆಂದು ತಿಳಿಯಬೇಕು.

ಶಿವ-ಶಕ್ತಿಯರ ವಿವಾಹವ, ಮಾಡುವಕಾಲದಲ್ಲಿ, ನಂದಿ ಮುಖವ ಪ್ರಥಮ ಮಾಡುತಿದ್ದರು. ಶಿವ ಶಕ್ತಿಯರ ತಿಂದ ಮೇಲೆ, ವೃಷಭನ ಶೃಂಗಿ

ಬಾಶಿಂಗವೆಂದು ಕಟ್ಟುವರು. ಶಕ್ತಿಯರಿಗೆ ದಂಡಿಯನ್ನು ಕಟ್ಟುವರು. ಶಿವ ಶಕ್ತಿಯರ ಶಾಶಿಯನೆರೆವ ಕಾಲದಲ್ಲಿ ಮಧ್ಯದಲ್ಲಿ ಪರದಿಯನ್ನು ಹಿಡಿದು ಆ ಪರದಿಯಮೇಲೆ ನಂದಿಯ ರೂಪಂ ಬರೆದು ಮಧ್ಯದಲ್ಲಿ ನಂದಿ ತಾನೇ ನಿಂದಿ ಹುವನೆಂದು. ಶಿವ ಶಕ್ತಿಯರ ಕೈಯಲ್ಲಿ ತಂಡುಲವ ಕೊಟ್ಟು. ಒಬ್ಬರ ಶಿರದ ಮೇಲೊಬ್ಬರು ಅಕ್ಕಿತಳವಾಗ. ಮದಲು ನಂದಿಯಮೇಲೆ ಅಕ್ಕಿತಳೆದು ಶಕ್ತಿಯಶಿರದಮೇಲೆಶಿವನು ಅಕ್ಕಿ ನೀಡುವ, ಶಿವನಶಿರದಮೇಲೆ ಶಕ್ತಿಅಕಿ ನೀಡುವ ಳು. ಉಭಯ ಹಸ್ತವ ಗೂಡಿ ನಂದಿಯ ಪರದಿಯ ಕಡೆಗೆ ತೆಗೆದು ಶಿವಗಣಂಗಳು ನೆರೆದು ಇಬ್ಬರು ಶಿರಗನು ಹೊಂದುಮಾಡಿ ಕಟ್ಟಿ, ಒಬ್ಬರಿಗೊಬ್ಬರು, ಬೆಲ್ಲವಾಗಿ ಜೀವಾಗಿರಿ ಎಂದು ಬೆಲ್ಲ ಜೀರಿಗಿಯನ್ನು ಶಿರಗಲಿ ಕಟ್ಟಿ ಶಿವ ಶಕ್ತಿಯರಿಬ್ಬರನ್ನು ರೂಢ ವೃಷಭನ ಮೇಲೆ ಕುಳ್ಳಿರಿಸಿ, ನಂದಿಕೇಶ್ವರನೇ ಮೃದಂಗ ಮುಂತಾಗಿ, ಸರ್ವ ಮುಖ ಸಂದಿನಾಥ ಶಿವಶಕ್ತಿಯರ, ಪ್ರದಕ್ಷಿಣಿ ಮೆರವಣಿಗೆಯಮಾಡಿದರೆಂದು ಹೇಳಲ್ಪಟ್ಟಿತು.

ಸರ್ವ ದೇವಾದಿ ದೇವತಾದಿಗಳು ಬಂದು ಲಿಂಗ ದರ್ಶನದ ಕಾರಣ ಆವಾವೆಂದರೆ. ನಂದಿ ದರ್ಶನ ಸ್ಪರ್ಶನವಂಮಾಡಿ. ತದನಂತರದಲ್ಲಿ ನಂದಿಯ ಪಾದಸೇವೆಯಂ ಮಾಡಿ ನಂದೀಶ್ವರನ ಬೆನ್ನಹಿಂದೆ ಏಕ ಚಿತ್ತನಾಗಿ ನಿಂತು ಪುನಃ ದೀರ್ಘನಮಸ್ಕಾರವಂ ಮಾಡಿ ಎದ್ದುನಿಂತು, ಕರ ಕಮಲಂಗಳಂ ಮುಗಿದು ನಂದಿ ಸ್ತೋತ್ರವನ್ನು ಮಾಡುವದೆಂದು ಹೇಳಲ್ಪಟ್ಟಿತು.

## ಇಲ್ಲಿಗೆ ಪ್ರಸಾದವಾಕ್ಯವು ಸಮಾಪ್ತವು.

ಈ ಪ್ರಸಾದ ಮಹಿಮೆ ಎಂಬ ಗ್ರಂಥಕ್ಕೆ ಕೆಂಚಯ್ಯಸ್ವಾಮಿ ಹಿರೇಮಠ, ಕೆಂಭಾವಿ ಇವರು ಭಾವಾರ್ಥವನ್ನು ಬರದಿದ್ದಾರೆ. ಈ ಗ್ರಂಥವು ಮೊದಲು ಸಂಸ್ಕೃತದಲ್ಲಿ ಆಗಮ ರೂಪವಾಗಿತ್ತು. ಇದರಲ್ಲೇನಾದರೂ ದೋಷಗಳಿದ್ದರೆ, ಹಂಸಕ್ಷೀರ ನ್ಯಾಯದಹಾಗೆ ತಪ್ಪನ್ನು ತಿದ್ದಬಹುದು.

ಶಕ ೧೮೭೮ ದುರ್ಮುಖಿನಾಮ ಸಂವತ್ಸರ ಚೈತ್ರ ಶು. ೧೫ ಬುಧವಾರ ದಿವಸ ಎರಡನೇ ಪ್ರತಿ ಬರದಿರುವೆವು.

ಶ್ರೀ